|| ಶ್ರೀಃ ||

ಶ್ರೀ ಹರಿ-ಗುರು-ಭಕ್ತವರೇಣ್ಯರ

# ಸ್ತುತಿಪದ-ಮಣಿಮಂಜರೀ

ಲೇಖಕರು
ಸತ್ಕೀರ್ತನಾಲಂಕಾರ ವಿ. ಶಿವಮೊಗ್ಗ ಶ್ರೀನಿವಾಸದಾಸರು

ಪ್ರಕಾಶಕರು
ಸತ್ಕೀರ್ತನಾಲಂಕಾರ ವಿ. ಶಿವಮೊಗ್ಗ ಶ್ರೀನಿವಾಸದಾಸರು
ನಂ. ೧೩೩೫, 'ಶ್ರೀ'ನಿವಾಸ, ೪ನೇ ಮುಖ್ಯರಸ್ತೆ
೫ನೇ ಅಡ್ಡರಸ್ತೆ, ಚಂದ್ರಾಲೇಔಟ್, ಬೆಂಗಳೂರು-೪೦

*Sree Hari Guru Bhaktha Varenyara STHUTIPADA MANIMANJARI:* written by Sri. Sathkirthanalankara V. Shimoga Srinivasadasaru, No. 1335, 4th Main, 5th Cross, Chandra Layout, Bangalore-40.

Pages : XX+123



Copies : 1000

Price : 30/-

*"THIS BOOK IS PUBLISHED WITH THE FINANCIAL ASSISTANCE OF TIRUMALA TIRUPATI DEVASTHANAMS UNDER THEIR SCHEME AID TO PUBLISH RELIGIOUS BOOKS."*

*D.T.P. by :*
*Varshini Graphics,* Bangalore-40 ☎ : 3402575

***Printed by:***
***Sneha Printers***
22, 2nd Main, Attiguppe
Vijayanagar II Stage,
Bangalore-40 ☎ : 3392814, 3302417
E-mail-Snehaprints@usa.net

ಕಲ್ಯಾಣಾದ್ಭುತ ಗಾತ್ರಾಯ। ಕಾಮಿತಾರ್ಥಪ್ರದಾಯಿನೇ।
ಶ್ರೀಮದ್ವೇಂಕಟ ನಾಥಾಯ। ಶ್ರೀನಿವಾಸಾಯ ಮಂಗಲಂ॥



ಬಂದು ನಿಂದಿಹ ನೋಡಿ। ಭೂತಳದಿ ವೆಂಕಟ।
ಇಂದಿರೆಯ ವಡಗೂಡಿ॥ (ಶ್ರೀ ಪುರಂದರ ದಾಸರು)

ಕಂಗಳ ಸಫಲತೆ। ಗಿರಿ ಶ್ರೀನಿವಾಸನ।
ಮಂಗಳ ದರುಶನವು॥ (ಸ್ತುತಿಪದ-ಮಣಿಮಂಜರೀ)

ನ ಮಾಧವಸಮೋದೇವಃ। ನ ಚ ಮಧ್ವಸಮೋಗುರುಃ।
ನ ಚ ತಸ್ಯ ಸಮಂ ವಾಕ್ಯಂ। ನ ಚ ತಸ್ಯ ಸಮಃಪುಮಾನ್॥



ಮಧ್ವರಾಯರ ಕರುಣೆ। ಪಡೆಯದವ ಧರೆಯೊಳಗೆ
ಇದ್ದರೇನು ಇಲ್ಲದಿದ್ದರೇನು॥ (ಶ್ರೀ ವಿಜಯದಾಸರು)

ನಾಕಪತಿಭವಾದ್ಯಮರ ವಂದ್ಯಪಾದರು। ಇವರು
ಆಖಣಾಶ್ಮರು - ಶ್ರೀನಿವಾಸ ಭಜಕರು॥
(ಸ್ತುತಿಪದ-ಮಣಿಮಂಜರೀ)

ಮಿಥ್ಯಾ ಸಿದ್ಧಾಂತ ದುರ್ಧ್ವಾಂತ-ವಿಧ್ವಂಸನ ವಿಚಕ್ಷಣಃ।
ಜಯತೀರ್ಥಾಖ್ಯ ತರಣಿರ್ಭಾಸತಾಂ ನೋ ಹೃದಂಬರೇ॥



ಸಾರಿಭಜಿಸಿರೋ। ಟೀಕಾಚಾರ್ಯರಂಘ್ರಿಯಾ।
ಘೋರ ಪಾತಕಾಂಬುಧಿಯ। ಪಾರುಮಾಳ್ಪರ॥
(ಶ್ರೀ ವಿಜಯ ದಾಸರು)

ಯೋಗೀಂದ್ರ ಸುರನಾಥ। ಶೇಷ ಆವೇಶ।
ಕಾಗಿಣೀ ತಟದೇಶ। ಮಳಖೇಡ ವಾಸ॥
ಬಾಗಿ ಬೇಡುವೆ ಜೀಯ। ಕೊಡು ಎಮಗೆ ಲೇಸ।
ತಾಗಿಸಲು ತವಕರುಣೆ। ಪೊರೆವ ಶ್ರೀನಿವಾಸ॥
(ಸ್ತುತಿಪದ-ಮಣಿಮಂಜರೀ)

ಪೂಜ್ಯಾಯ ರಾಘವೇಂದ್ರಾಯ। ಸತ್ಯ ಧರ್ಮ ರತಾಯಚ।
ಭಜತಾಂ ಕಲ್ಪವೃಕ್ಷಾಯ। ನಮತಾಂ ಕಾಮಧೇನವೇ॥



ರಾಘವೇಂದ್ರ ಗುರು। ರಾಯರ ಸೇವಿಸಿರೋ।
ಸೌಖ್ಯದಿ ಜೀವಿಸಿರೋ॥ (ಶ್ರೀದ ವಿಠ್ಠಲರು)

ಗುರು ರಾಘವೇಂದ್ರರು। ಈ ಧರೆ ಜನರಿಗೆ।
ಸುರಮಣಿ ಸುರಧೇನು। ಸುರತರುವೋ॥
ಗುರು ರಾಘವೇಂದ್ರರ। ಬೃಂದಾವನ ಸೇವೆ।
ಪರಗತಿ ಸುಖಕಿಲ್ಲಿ। ಸಾಧನವೋ॥
(ಸ್ತುತಿಪದ-ಮಣಿಮಂಜರೀ)

ಭಕ್ತ್ಯಾದಿ ಗುಣ ಸಂಯುಕ್ತಂ। ಭಕ್ತಾಭೀಷ್ಟ ಪ್ರದಾಯಕಂ।
ಪುರಂದರ ಗುರುಂವಂದೇ। ದಾಸ ಶ್ರೇಷ್ಠಂ ದಯಾನಿಧಿಂ॥



ಶ್ರೀ ಪುರಂದರದಾಸರು

ದಾಸರೆಂದರೆ। ಪುರಂದರ ದಾಸರಯ್ಯ॥

(ಶ್ರೀ ವ್ಯಾಸರಾಜರು)

ಧರೆಯೊಳು ಪುರಂದರ। ದಾಸರನೊಲಿಸಲು।
ಪರಿಪರಿ ವಿಧದಲ್ಲಿ। ಸುಖವುಂಬೆಯೋ॥
ಚರಿಸುವಿ ಭುವಿಯಲ್ಲಿ। ಪರಮ ಪಾವನನಾಗಿ।
ಧರಿಸುವಿ ಕೀರ್ತಿಯ। ಸುರನೆನಿಸೀ॥

(ಸ್ತುತಿಪದ-ಮಣಿಮಂಜರೀ)

# ಆಶೀರ್ವಚನ

ಶ್ರೀಮತ್ ಪರಮಹಂಸಪರಿವ್ರಾಜಕಾಚಾರ್ಯಪದವಾಕ್ಯಪ್ರಮಾಣಪಾರಾವಾರಪಾರಂಗತ. ಸರ್ವತಂತ್ರ ಸ್ವತಂತ್ರಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲ-ರಘುಪತಿವೇದವ್ಯಾಸದೇವದಿವ್ಯ ಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀ ಮನ್ಮಧ್ವಾ-ಚಾರ್ಯಮುಖ್ಯಮಹಾಸಂಸ್ಥಾನಾಧೀಶ್ವರಶ್ರೀಮದ್ರಾಘವೇಂದ್ರ ಮಠೀಯ ವೇದಾಂತ ಸಾಮ್ರಾಜ್ಯದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರ ಶ್ರೀಮತ್‌ಸುಯಮೀಂದ್ರತೀರ್ಥ-ಶ್ರೀಪಾದಕರಕಮಲಸಂಜಾತ ಶ್ರೀಮತ್‌ಸುಜಯೀಂದ್ರತೀರ್ಥವರಕುಮಾರಕರಾದ-

## ಶ್ರೀ ಶ್ರೀಮತ್‌ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹ ವಚನ

ನಮಗೆ ಪರಮಪ್ರಿಯ ಶಿಷ್ಯರಾದ ಸತ್ಕೀರ್ತನಾಲಂಕಾರ ಹರಿಕಥಾ ಕೇಸರಿ. ಶ್ರೀ ಶಿವಮೊಗ್ಗ ಶ್ರೀನಿವಾಸದಾಸರು “ಶ್ರೀ ಹರಿಗುರು ಭಕ್ತವರೇಣ್ಯರ ಸ್ತುತಿಪದ-ಮಣಿಮಂಜರೀ” ಎಂಬ ಈ ಗ್ರಂಥವನ್ನು ತಾವೇ ಸ್ವತಃ ರಚಿಸಿ ಪ್ರಕಾಶಿಸುತ್ತಿರುವುದು ತುಂಬ ಸಂತಸದ ಸಂಗತಿ. ದಾಸರು ತುಂಬ ಸಹೃದಯಿಗಳು, ಉತ್ತಮ ವಾಗ್ಮಿಗಳು. ಸುಮಾರು ೬೦ ವರ್ಷಗಳಿಂದಲೂ ಹರಿಕಥೆಗಳ ಮೂಲಕ, ಉಪನ್ಯಾಸಗಳ ಮೂಲಕ ಎಲ್ಲೆಡೆ ಸಂಚರಿಸಿ ಧರ್ಮಜಾಗೃತಿಯನ್ನು ಮೂಡಿಸಿರುತ್ತಾರೆ. ಶ್ರೀ ಗುರು ರಾಘವೇಂದ್ರತೀರ್ಥರಲ್ಲಿ ಅತ್ಯಂತ ಭಕ್ತಿಯುಳ್ಳವರು. ಈ ಕೃತಿಯ ಲಾಭವನ್ನು ಸಕಲ ಆಸ್ತಿಕರು ಪಡೆಯಬೇಕು.

ಕೃತಿ ಕರ್ತೃಗಳಿಗೂ, ಮುದ್ರಕರಿಗೂ ಪಠನ-ಪಾರಾಯಣಾದಿಗಳನ್ನು ಮಾಡುವವರಿಗೂ, ಸಕಲ ಸದ್ಭಕ್ತರಿಗೂ ಅಸ್ಮದುಪಾಸ್ಯಮೂರ್ತಿ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯ-

ಪ್ರಾಣಾಂತರ್ಗತ ಸೀತಾಪತಿ ಶ್ರೀಮನ್ಮೂಲ ರಾಮಚಂದ್ರ ದೇವರು ಇತೋಽಪ್ಯತಿಶಯವಾದ ಆಯುರಾರೋಗ್ಯ ಭಾಗ್ಯಗಳನ್ನು ಕೊಟ್ಟು ಕಾಪಾಡಲೆಂದು ಹಾರೈಸುವೆವು.

ಇತಿ ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ಶ್ರೀ ಸುಶಮೀಂದ್ರ ಶ್ರೀಪಾದಂಗಳವರು**

ಮಂತ್ರಾಲಯ

ಕ್ಯಾಂಪ್ ಮಂತ್ರಾಲಯ

ದಿ : ೧೩-೨-೨೦೦೦

# ಅನುಕ್ರಮಣಿಕೆ

# ಲೇಖಕರ ನುಡಿ

॥ ಶ್ರೀ ಪತಿರ್ಮಾನದೋನಃ ॥

**ಸ್ತುತಿಪದ-ಮಣಿಮಂಜರೀ ಪುಸ್ತಕದ ಲೇಖಕನ ಹಾಗೂ ಪ್ರಕಾಶಕನ, ಸವಿನಯದ ವಿಜ್ಞಪ್ತಿ-ಕೃತಜ್ಞತಾ ಸಮರ್ಪಣೆ ಮತ್ತು ಹಾರ್ದಿಕ ಶುಭಾಶಯಗಳು.**

ಶ್ರೀ ಹರಿಗುರು ಭಕ್ತರ ಭಕ್ತರಾದ ಆಧ್ಯಾತ್ಮಿಕ ಬಂಧುಗಳೇ,

ಈ ಸ್ತುತಿ ಪದಗಳು ಶ್ರೀ ಶ್ರೀನಿವಾಸಾಂಕಿತದಿಂದ ಕೃತವಾಗಿ ಕೇವಲ ಕೃತಿಗಳಾಗಿದ್ದವು. ನನ್ನ ಹಿರಿಯರು, ಯತಿವರೇಣ್ಯರು ಪ್ರಾಚೀನ ಉದ್ದಾಮ ಪಂಡಿತರೆಲ್ಲರೂ ನನ್ನಿಂದಲೇ ಹಾಡಿಸಿ, ಮೆಚ್ಚುಗೆ ವ್ಯಕ್ತಪಡಿಸಿ, ಉತ್ಸಾಹ ತುಂಬಿ ಪ್ರೋತ್ಸಾಹಿಸಿದ ಪರಿಣಾಮವಾಗಿ, ಆ ಕೃತಿಗಳು ವಿಶಿಷ್ಟತೆಯನ್ನು ಪಡೆದು ಪ್ರಚಾರವಾಗಿ ಸುಜನರ ಮನ್ನಣೆ ಪಡೆದಿದ್ದರಿಂದ, ಸಾಮಾನ್ಯ ಜನರೂ ಈ ಕೃತಿಗಳನ್ನು ಬಯಸಿ ಕಲಿತು ಹಾಡತೊಡಗಿದರು. ನಮ್ಮ ಕುಟುಂಬದ ಎಲ್ಲಾ ಸದಸ್ಯರೂ ಈ ಕೃತಿಗಳನ್ನು ಬಾಯಿಪಾಠ ಮಾಡಿ ಹಾಡಿ ಹರ್ಷಿಸಿದ್ದನ್ನು ಕಂಡು ಅನೇಕರು ಪುಲಕಿತಗೊಂಡು ತಾವೂ ಕಲಿತು ಹಾಡತೊಡಗಿದರು.

ನಮ್ಮ ಕುಟುಂಬ ವರ್ಗದವರು ಈ ಕೃತಿಗಳನ್ನು ಪುಸ್ತಕ ರೂಪದಲ್ಲಿ ತರಲು ಯೋಜನೆ ಹಮ್ಮಿಕೊಂಡರು. ಹೀಗಿರುವಾಗ ಆಕಸ್ಮಿಕವಾಗಿ ನನ್ನ ಅಭಿಮಾನಿಗಳೂ ಪೂಜ್ಯರೂ ಆದ ಶ್ರೀಯುತ ಆದ್ಯ ರಾಮಾಚಾರ್ಯರು ಭೆಟ್ಟಿಯಾದರು. ಈ ವಿಷಯ ತಿಳಿಸಿದೆ. ಪರಮ ಸಂತೋಷ ವ್ಯಕ್ತಪಡಿಸಿದ್ದಲ್ಲದೇ ಉತ್ಸಾಹಪೂರ್ಣರಾಗಿ, ತಿರುಪತಿ ತಿರುಮಲೈ ದೇವಸ್ಥಾನದಿಂದ ಧಾರ್ಮಿಕ ಪುಸ್ತಕಗಳ ಪ್ರಕಟಣೆಗೆ, ಲೇಖಕರಿಗೆ ಸಹಾಯ ಧನ ನೀಡುವ

ಯೋಜನೆಯಡಿಯಲ್ಲಿ ವ್ಯವಹರಿಸಿ ನಮ್ಮ ಈ ಕಾರ್ಯಕ್ಕೆ ಆರ್ಥಿಕ ನೆರವನ್ನು, ನಮ್ಮ ನಿರೀಕ್ಷೆಗೂ ಮೀರಿ ದೊರಕಿಸಿಕೊಟ್ಟು ಈ ಶ್ರೀನಿವಾಸನ ದಾಸನಿಗೆ, ಶ್ರೀನಿವಾಸನ ಕರುಣೆ, ಪ್ರಸಾದ ಕಾಣಿಕೆ ದೊರಕಿಸಿಕೊಟ್ಟರು. ಅವರಿಗೆ ಕೃತಜ್ಞತೆಗಳೊಂದಿಗೆ ಹಾರ್ದಿಕ ಶುಭಾಶಯಗಳನ್ನು ಅರ್ಪಿಸುತ್ತೇನೆ.

ನನ್ನ ಷಡ್ಡಕನ ಮಗಳು ನನ್ನ ಸೋದರ ಮಾವನ ಸೊಸೆಯೂ ಆದ ಚಿ||ಹ||ಕುಂ||ಶೋ|| ವಾರುಣಿ ಜಯತೀರ್ಥಾಚಾರ್ ಕಡ್ಡೀ, ಹಾಗೂ ಅವರ ಸಂಗಾತಿಯಾದ ಸಂಗೀತ ವಿದುಷಿ ಹ||ಕುಂ||ಶೋ|| ಕಟ್ಟೆ ಭಾರತೀ ಶ್ಯಾಮಣ್ಣ, ಮಲ್ಲೇಶ್ವರಂ ಬೆಂಗಳೂರು. ಇವರು ನನ್ನ ಕೃತಿಗಳು, ಸಂಗೀತ ದೃಷ್ಟಿಯಿಂದ ರಾಗ-ತಾಳ ಬದ್ಧವಾಗಿರಬೇಕೆಂದು ಬಯಸಿ ಹಾಡಿ ಪರಿಶೀಲಿಸಿ ಸಿದ್ಧಪಡಿಸಿಕೊಟ್ಟಿರುತ್ತಾರೆ. ಇವರ ಶ್ರದ್ಧಾಪೂರ್ಣ ಕಾರ್ಯಕ್ಷಮತೆಯಿಂದ, ಸಹಕಾರದಿಂದ ಸಂತೃಪ್ತನಾದ ನಾನು ಇವರೀರ್ವರಿಗೂ ಹಾರ್ದಿಕ ಶುಭಾಶೀರ್ವಾದ ಮಾಡಿ ನನ್ನ ಅಂತರ್ಯಾಮಿಯಲ್ಲಿ ಕ್ಷೇಮ ಚಿಂತನೆ ಮಾಡಿರುತ್ತೇನೆ.

ಈ ಪುಸ್ತಕದ ಕರಡು ಪ್ರತಿಗಳನ್ನು ಮುದ್ರಣಕ್ಕೆ ಅಣಿ ಮಾಡಿಕೊಟ್ಟಿರುವ ನನ್ನ ಮಕ್ಕಳು ಅಳಿಯಂದಿರಿಗೆಲ್ಲಾ ಹಾರ್ದಿಕವಾಗಿ ಶುಭ ಕೋರಿ ಆಶೀರ್ವದಿಸಿರುತ್ತೇನೆ.

ವಿಕ್ರಮ ನಾಮ ಸಂವತ್ಸರದ ವೈಶಾಖ ಶುದ್ಧ ತೃತೀಯಾ, (ತದಿಗೆ) ನಾನು ೭೫ನೆಯ ವರ್ಷಕ್ಕೆ ಕಾಲಿಟ್ಟಿರುವ ಸಂದರ್ಭದಲ್ಲಿ ಈ ಸ್ತುತಿಪದ ಮಣಿ ಮಂಜರಿಯು ಯತಿತ್ರಯರ ಸಮಕ್ಷಮದಲ್ಲಿ ಶ್ರೀನಿವಾಸನ ಕರುಣೆಯಿಂದ ಅವರ ಅಮೃತ ಹಸ್ತದಿಂದ ಬಿಡುಗಡೆಯಾಗುತ್ತಿರುವುದು ನಮ್ಮೆಲ್ಲರಿಗೂ ಸಂತೋಷಕರ ಸಂಗತಿಯಾಗಿರುತ್ತದೆ.

ನನ್ನ ಹುಟ್ಟಿದ ಹಬ್ಬವನ್ನು ನಮ್ಮ ತಾಯಿಯವರು (ನನ್ನನ್ನು ಶ್ರೀನಿವಾಸನ ವರಪುತ್ರನೆಂದೇ ಭಾವಿಸಿದ್ದರಾದ್ದರಿಂದ) ಪ್ರತಿ ಸಂವತ್ಸರದ ವೈಶಾಖ ಶುದ್ಧ ತದಿಗೆಯೆಂದು ಮಾಡುತ್ತಿದ್ದರು. ಈ ವಿಕ್ರಮನಾಮ ಸಂವತ್ಸರದ ವೈಶಾಖ ಶುದ್ಧ ತದಿಗೆಗೆ ನನಗೆ ೭೪ ವರ್ಷ ತುಂಬಿ ೭೫ನೆಯ ವರ್ಷಕ್ಕೆ ಕಾಲಿಡುವ

ಸುಸಂದರ್ಭದ ಜನ್ಮ ದಿನೋತ್ಸವ. ನಾನು ಗೃಹಸ್ಥನಾಗಿ ಹರಿದಾಸ ವೃತ್ತಿಯಲ್ಲಿ ೫೦ ವರ್ಷ ಕೌಟುಂಬಿಕ ಜೀವನ ನಡೆಸಿ ಮತ್ತು ೬೦ ವರ್ಷಗಳ ಕಾಲ ಸತತವಾಗಿ ಹರಿಕಥಾ ಮಾಡಿದ್ದರ ಮಂಗಳೋತ್ಸವ. ಇವುಗಳ ಸವಿ ನೆನಪಿಗಾಗಿ ಈ ಶುಭದಿನದಂದು "ಸ್ತುತಿಪದ ಮಣಿಮಂಜರೀ" ಬಿಡುಗಡೆ-ಯಾಗುತ್ತಿರುವುದು ಅತ್ಯಂತ ಸಂತೋಷಕರವಾಗಿದೆ.

ನಾನು ಬಾಲ್ಯದಿಂದ ಈವರೆಗೆ ಅನೇಕ ಗ್ರಂಥಗಳನ್ನು ಓದಿ, ಅನುಭಾವಿಗಳಿಂದ ತಿಳಿದು ಪ್ರಾಜ್ಞರ ಮುಂದೆ ಹೇಳಿ, ಚರ್ಚಿಸಿ ಅರಿತುಕೊಂಡಿದ್ದನ್ನು ನನ್ನ ಅನುಭವಗಳನ್ನೂ ಇದಕ್ಕೆ ಸೇರಿಸಿ ನನ್ನದೇ ಆದ ಶೈಲಿಯಲ್ಲಿ ಪ್ರಾಜ್ಞರುಗಳ ಮುಂದೆ ನಿವೇದಿಸಿ ಅದನ್ನು ನನ್ನ ಕೃತಿಗಳಲ್ಲಿ ಜನರಿಗೆ ತಿಳಿಸಲು ಪ್ರಾಮಾಣಿಕ ಪ್ರಯತ್ನ ಮಾಡಿರುತ್ತೇನೆ.

"ಸ್ಥಾಲೀಪುಲಾಕ-ನ್ಯಾಯೇನ" ನಮ್ಮ ಹಿರಿಯರೂ ಗುರುಗಳೂ ಆದ ಹರಿದಾಸರತ್ನಂ ಶ್ರೀ ಗೋಪಾಲದಾಸರಲ್ಲಿ ಈ ಕೃತಿಗಳನ್ನು ಹಾಡಿ ವಿಮರ್ಶಿಸಿ ಅವರ ಮೆಚ್ಚುಗೆ ಪಡೆದಿರುತ್ತೇನೆ. ಅಷ್ಟೇ ಅಲ್ಲದೆ ಅವರು ಶುಭಕೋರಿ ಹರಸಿರುತ್ತಾರೆ.

ಈ ಕೃತಿಗಳನ್ನು ಈಗಾಗಲೇ ಬಿಡಿಬಿಡಿಯಾಗಿ ಶ್ರೀ ಶ್ರೀನಿವಾಸ ಮತ್ತು ಭಾರತೀಶರ ಪಾದದ್ವಂದ್ವಗಳಿಗೆ ಸಮರ್ಪಿಸಿರುತ್ತೇನೆ.

ಈ ಪುಸ್ತಕವು ಎಲ್ಲಾ ಭಗವದ್ಭಕ್ತರಿಗೆ ಸದುಪಯೋಗವಾಗಿ ಸಂತೋಷಪಡಿಸಲೆಂದು ಶ್ರೀ ಹರಿ ಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

ಇದಕ್ಕೆಲ್ಲ ಮೂಲಶಕ್ತಿಯಾಗಿ ನಮ್ಮ ಕೆಲಸ ಸುಗಮವಾಗಿ ಪೂರ್ಣಗೊಳ್ಳಲು ಆರ್ಥಿಕ ಸಹಾಯ ಸಹಕಾರ ನೀಡಿ ಪ್ರೋತ್ಸಾಹಿಸಿದ ಟಿ.ಟಿ.ಡಿ. ಧಾರ್ಮಿಕ ಪುಸ್ತಕ ಪ್ರಕಟಣೆ ವಿಭಾಗದ ಎಲ್ಲಾ ಅಧಿಕಾರಿ ವರ್ಗಕ್ಕೂ ಮತ್ತು ಅಧಿಕಾರಿ ಪ್ರಮುಖರಾದ ಎಕ್ಸಿಕ್ಯೂಟಿವ್ ಆಫೀಸರ್ ಇವರಿಗೂ ಕೃತಜ್ಞತಾ ಸಮರ್ಪಣೆಯೊಂದಿಗೆ ಶುಭಕೋರಿ, ಶ್ರೀನಿವಾಸನು ಆಯುರಾರೋಗ್ಯಾದಿ ಭಾಗ್ಯ ಕೊಡಲಿ ಎಂದು ಹಾರೈಸುತ್ತೇನೆ.

ಈ ಸ್ತುತಿಪದ ಮಣಿ ಮಂಜರೀ ಪುಸ್ತಕಕ್ಕೆ ಮುನ್ನುಡಿ ಬರೆದು ಕೊಡಬೇಕೆಂದು ಕೇಳಿದ ನನ್ನ ಈ ಪ್ರಾರ್ಥನೆಗೆ ಬೆಲೆಕೊಟ್ಟು ಪರಮ

ಪ್ರೀತಿಯಿಂದ ಮುನ್ನುಡಿ ಬರೆದುಕೊಟ್ಟು ಅನುಗ್ರಹ ಫಲ ಮಂತ್ರಾಕ್ಷತೆ ಕೊಟ್ಟು ಶುಭಕೋರಿ ಹರಸಿದ ಮಂತ್ರಾಲಯ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಸರ್ವಜ್ಞಾಚಾರ್ಯರ ಪೀಠದಲ್ಲಿ ಅಧುನಾ ವಿರಾಜಮಾನರಾದ ಪರಮ ಪೂಜ್ಯರಾದ ಶ್ರೀ ಶ್ರೀ ಸುಶಮೀಂದ್ರ ತೀರ್ಥರ ದಿವ್ಯ ಚರಣದ್ವಯಕ್ಕೆ ಅನಂತ ವಂದನೆಗಳನ್ನು ಸಮರ್ಪಿಸುವುದರ ಮೂಲಕ ಕೃತಜ್ಞತೆಗಳನ್ನು ಅರ್ಪಿಸಿರುತ್ತೇನೆ.

ಅಂದವಾಗಿ ಛಾಯಾಕ್ಷರ ಜೋಡಣೆ ಮಾಡಿದ ವರ್ಷಿಣಿ ಗ್ರಾಫಿಕ್ಸ್‌ನವರಿಗೂ ಹಾಗೂ ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಆಕರ್ಷಣೀಯವಾಗಿಯೂ ಆದರ್ಶವಾಗಿಯೂ ಹೊರ ಬಂದು ಕಂಗೊಳಿಸುವಂತೆ ಶ್ರದ್ಧೆ ವಹಿಸಿದ ಸ್ನೇಹಾ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ವಿ. ಮಹೇಶ್‌ರವರಿಗೂ, ಸಿಬ್ಬಂದಿ ವರ್ಗದವರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸಿರುತ್ತೇನೆ.

ಓದುಗರಿಗೆ ಕುರಿತು ಹೇಳಿದನ್ನು ಅರಿತು-ವರ್ತಿಸಿ-ಸಿದ್ಧಿ ಪಡೆದಲ್ಲಿ ನನ್ನ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ. ಇದಲ್ಲದೆ ನಮ್ಮ ಕಾರ್ಯಕ್ಕೆ ಪ್ರತ್ಯಕ್ಷವಾಗಿ ಮತ್ತು ಅಪ್ರತ್ಯಕ್ಷವಾಗಿ ಸಹಕಾರ ಸಹಾಯ ಮಾಡಿದ ಎಲ್ಲಾ ಹಿತೈಷಿಗಳಿಗೂ ಶುಭಕೋರಿ ಹರಸಿ ವಿರಮಿಸುವೆ.

ಇತಿ ತಮ್ಮವನೇ ಆದ

**ಸತ್ಕೀರ್ತನಾಲಂಕಾರ ವಿ. ಶಿವಮೊಗ್ಗ ಶ್ರೀನಿವಾಸದಾಸರು**

II ಶ್ರೀಃ II

ಸತ್ಕೀರ್ತನಾಲಂಕಾರ ಪರಿಕಥಾರತ್ನಂ,

ವಿ. ಶಿವಮೊಗ್ಗ ಶ್ರೀನಿವಾಸದಾಸರು, ಬೆಂಗಳೂರು.

# ಇವರ ಸಂಕ್ಷಿಪ್ತ ಜೀವನ ಚರಿತ್ರೆ (ಪರಿಚಯಾತ್ಮಕ ಲೇಖನ)

ಕರ್ನಾಟಕದ ಶ್ರೀ ಹರಿದಾಸರ ಪಂಥಪಿಡಿದು ಸಾಧಿಸಿದ ಭಗವದಪರೋಕ್ಷ ಜ್ಞಾನಿಗಳ ಪಂಕ್ತಿಯಲ್ಲಿ ಶ್ರೀ ಪುರಂದರದಾಸರು, ವಿಜಯ ದಾಸರೇ ಮೊದಲಾದ ಸುಪ್ರಸಿದ್ಧ ವ್ಯಕ್ತಿಗಳ ಸಾಲಿನಲ್ಲಿಯೇ ಕಾಖಂಡಕಿ ಶ್ರೀ ಪ್ರಸನ್ನ ವೆಂಕಟದಾಸರು ಒಬ್ಬರು. ಇವರ ಶಿಷ್ಯ ವರ್ಗದಲ್ಲಿ ಒಬ್ಬರಾದ ಮಳಿಗಿ (ಮಾಳಗಿ) ವಸುದೇವ (ವಾಸುದೇವ) ವಿಠ್ಠಲಾಂಕಿತರಾದ ಕಡ್ಡಿ ವಾಸುದೇವಾಚಾರ್ಯರು ಒಬ್ಬರು. ಅವರ ಮಕ್ಕಳೇ ಕಡ್ಡಿ ನರಸಿಂಹಮೂರ್ತಾಚಾರ್ಯರು. ಇವರು ನರಹರಿ ವಿಠ್ಠಲಾಂಕಿತದಾಸರು ಮತ್ತು ಪ್ರಸಿದ್ಧ ಶಾಸ್ತ್ರ, ಕಾವ್ಯ, ಸಂಗೀತಾದಿಗಳಲ್ಲಿ ಅತ್ಯಂತ ನಿಪುಣರು. ಇವರಿಬ್ಬರಿಗೂ ಶ್ರೀ ಹರಿಯು ಪ್ರಸನ್ನ ವೆಂಕಟದಾಸರ ರೂಪದಿಂದ ಬಂದು ಅಂಕಿತ ದಯಪಾಲಿಸಿ ಕೃತಿ ರಚನೆಗೆ ಆಜ್ಞಾಪಿಸಿರುತ್ತಾನೆ. ಇಂತಹ ಮಹನೀಯರಾದ ವಾಸುದೇವ ವಿಠ್ಠಲರಿಗೆ ದೋಹಿತ್ರರು, ಹರಿದಾಸ ರತ್ನಂ ಗೋಪಾಲದಾಸರು. ನರಹರಿ ವಿಠ್ಠಲಾಂಕಿತ ದಾಸರಿಗೆ ಈ ಕೃತಿಯ ಕರ್ತೃವಾದ ಶಿವಮೊಗ್ಗ ಶ್ರೀನಿವಾಸದಾಸರು ದೋಹಿತ್ರರು (ಹಿರೇ ಮಗಳ ಮಗ) ಇವರಿಗೆ ಗುರುರಾಜನೆಂದು ಹೆಸರಿಟ್ಟರು. ಶ್ರೀನಿವಾಸನು ಇವರ ತಾಯಿಯ ಸ್ವಪ್ನದಲ್ಲಿ ಶ್ರೀನಿವಾಸನೆಂದು ಹೆಸರಿಡೆಂದು ಆಜ್ಞಾಪಿಸಿ, ಮುಂದೆ ನನ್ನ ದಾಸನಾಗಿ ಪ್ರಸಿದ್ಧಿ ಹೊಂದಿ ನಿಮ್ಮೆಲ್ಲಾ ಕಾರ್ಯಗಳನ್ನು ಗೌರವದಿಂದ ನಡೆಸಿಕೊಡುವನೆಂದು ಶ್ರೀಹರಿಯು ತಿಳಿಸಿರುತ್ತಾನೆ. ಇವರ ಜನನ "ಅಕ್ಷಯ ನಾಮ ಸಂವತ್ಸರದ ಅಧಿಕ ಚೈತ್ರ ಬಹುಳ ತ್ರಯೋದಶಿ ಶುಕ್ರವಾರ, (ವೈಷ್ಣವ ದ್ವಾದಶಿಯಂದು ೬-೪-೧೯೨೬)ರಲ್ಲಿ ಶಿವಮೊಗ್ಗ ನಗರದಲ್ಲಿ ಜನಿಸಿದರು. ತಂದೆ

ರಾಜಾರಾಯರು, ತಾಯಿ ಭೀಮರಥೀ ಬಾಯಿ. ಶ್ರೀನಿವಾಸ ದಾಸರು, ತಮ್ಮ ತಾಯಿಯ ಸ್ತುತಿ ಪದವಾದ "ಉಪಕಾರ ಎಷ್ಟೆಂದು ಬಣ್ಣಿಸಲಿ ತಾಯೆ" ಎಂಬ ಕೃತಿಯಲ್ಲಿ ಈ ವಿಷಯವನ್ನು ಉಲ್ಲೇಖಿಸಿರುತ್ತಾರೆ.

ಶ್ರೀನಿವಾಸ ದಾಸರು ಶ್ರೀನಿವಾಸನ ಕರುಣೆಯಿಂದ ಹುಟ್ಟು ಕವಿಗಳಾಗಿ ೧೦-೧೨ ವರ್ಷದ ಬಾಲಕನಿದ್ದಾಗಲೇ ಪದ-ಪದ್ಯ, ಕವಿತೆಗಳನ್ನು ಬರೆಯಲು ಪ್ರಾರಂಭಿಸಿ ತಮ್ಮ ಹಿರಿ-ಕಿರಿಯರ ಮುಂದೆ ಹಾಡಿ, ಸಂತೋಷಪಡಿಸಿದ್ದಾರೆ. ಆ ಕೃತಿಗಳ ಸಂಗ್ರಹ ಇವರಲ್ಲಿವೆ. ಹತ್ತು ವರ್ಷದ ಹುಡುಗರಿದ್ದಾಗಲೇ ನರಹರಿ ವಿಠ್ಠಲಾಂಕಿತರ ಧ್ರುವ ಚರಿತ್ರೆ ಹರಿಕಥೆಯನ್ನು ಇವರ ಸೋದರ ಮಾವನಿಗೆ ನರಹರಿ ವಿಠ್ಠಲಾಂಕಿತರು ಪಾಠ ಮಾಡುವಾಗ ಕೇಳಿ ಕೇಳಿ ಕಲಿತು ಸ್ಮೃತಿಯಲ್ಲಿಟ್ಟುಕೊಂಡು ನರಹರಿ ವಿಠ್ಠಲರ ಮುಂದೆ ಕೋಲಾರ ಜಿಲ್ಲೆಯ ಶಿಡ್ಲಘಟ್ಟದಲ್ಲಿ ಹರಿಕಥೆ ಮಾಡಿ ಅಲ್ಲಿಯ ಜನರ ಮತ್ತು ತಮ್ಮ ತಾತನ ಮೆಚ್ಚುಗೆ ಆಶೀರ್ವಾದ ಅನುಗ್ರಹ ಪಡೆದರು. ಅವರ ಅನುಗ್ರಹದಿಂದ ಇವರ ಮನಸ್ಸು ದೈವಿಕ ವಿಚಾರದಲ್ಲಿ ಅತಿ ಶ್ರದ್ಧೆ ಪಡೆಯಿತು. ಅಂದಿನಿಂದ ಇಂದಿನವರೆಗೂ ಶ್ರೀನಿವಾಸಾಂಕಿತದಿಂದ ಎಲ್ಲಾ ಕವಿತೆ, ಪದ, ಪದ್ಯ, ಹಾಡು, ಸಾಂಗತ್ಯ ಇತ್ಯಾದಿಗಳನ್ನು ರಚಿಸಿರುತ್ತಾರೆ, ಇನ್ನೂ ರಚಿಸುತ್ತಿದ್ದಾರೆ.

ಇವರು ಸುಪ್ರಸಿದ್ಧ ಹರಿದಾಸರಾಗಿ ಉದಿತ ಸೂರ್ಯನು ವರ್ಧಿಸಿ ಮೆರೆಯುವಂತೆ, ಬಾಲಕನಾದ ಶ್ರೀನಿವಾಸ ದಾಸರು ೧೪ ರಿಂದ ೭೪ ವರ್ಷದ ವರೆಗೂ ಅಭಿವರ್ಧಿಸಿ ೬೦ ವರ್ಷಗಳ ಕಾಲ ಶ್ರೀ ಹರಿ ಗುರುಗಳ ಮತ್ತು ಸಮಾಜ ಸೇವೆ ಹಾಗೂ ತತ್ವ ಪ್ರಚಾರವನ್ನು ಹರಿಕಥೆಯ ಮೂಲಕ ಮಾಡಿದ್ದಾರೆ. ಈಗಲೂ ಮಾಡುತ್ತಿದ್ದಾರೆ. ಇಂದಿಗೂ ಇವರು ತರುಣರಂತೆ ಹುಮ್ಮಸ್ಸಿನಿಂದ ಈ ಕಾರ್ಯದಲ್ಲಿ ನಿರತರಾಗಿದ್ದಾರೆ. "ಪಂಡಿತರು, ಪಾಮರರು, ಆರಿಗಾದರೂ ನಿನ್ನ ಕಂಡವರಿಗೆಲ್ಲ ಕೌತುಕ ತೋರಲಿ" ಎಂಬ ವಿಜಯ ದಾಸರ ವಾಣಿಯು ಇವರಲ್ಲಿ ಸಾರ್ಥಕವಾಗಿದೆ. ಇವರಿಂದ ರಚಿತವಾದ ಸ್ತುತಿ ಪದಗಳನ್ನು ಸಂಗ್ರಹಿಸಿ (ಕೆಲವನ್ನು) "**ಶ್ರೀ ಹರಿ-ಗುರು-ಭಕ್ತವರೇಣ್ಯರ। ಸ್ತುತಿಪದ ಮಣಿಮಂಜರೀ**" ಎಂಬ ಹೆಸರಿನಿಂದ ಮುದ್ರಣ ಮಾಡಿ ಭಗವತ್‌ಭಕ್ತರ ಮುಂದಿರಿಸಲು ಶ್ರೀನಿವಾಸನ ಪ್ರೇರಣೆಯಿಂದ ನಿರ್ಧರಿಸಿದ್ದಾರೆ. ಇವರು ತಮ್ಮ ಸೋದರ ಮಾವಂದಿರಾದ ಕಡ್ಡೀ ಶ್ರೀನಿವಾಸಾಚಾರ್ಯರು ಮತ್ತು ಮಾತೃ ವರ್ಗದ ಕಕ್ಕಂದಿರಾಗುವ ಹರಿದಾಸ ರತ್ನಂ ಗೋಪಾಲದಾಸರು

ಅಲ್ಲದೇ ಪರಮ ಪೂಜ್ಯ ಶ್ರೀ ಭಂಡಾರಕೇರಿ, ಮಠದ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರು ಈ ಮೂವರಲ್ಲಿದ್ದು ವಿದ್ಯಾ ವ್ಯಾಸಂಗ ಮಾಡಿ ಜ್ಞಾನಬಲ ಸಂಪನ್ನರಾಗಿರುತ್ತಾರೆ. ಉದ್‌ಗ್ರಂಥಗಳನ್ನು ಭಂಡಾರ ಕೇರಿ ಶ್ರೀಗಳವರಲ್ಲಿ ಓದಿರುತ್ತಾರೆ. ಆದ್ದರಿಂದ ಪಂಡಿತರಿಂದಲೂ, ಯತಿಗಳಿಂದಲೂ, ತಮ್ಮ ಸದಾಚಾರ, ಸದ್ಗುಣ, ವಿವೇಕಯುಕ್ತ ವ್ಯವಹಾರ ಇತ್ಯಾದಿಗಳಿಂದ ಸನ್ಮಾನ್ಯರಾಗಿ ಇಂದಿಗೂ ಎಲ್ಲರಿಗೂ ಬೇಕಾದವರಾಗಿ ಕೀರ್ತಿಗಳಿಸಿ ಖ್ಯಾತ ನಾಮರಾಗಿರುತ್ತಾರೆ. ಶ್ರೀ ಹರಿ ಗುರುಗಳ ಕರುಣೆಯಿಂದ ಆರೋಗ್ಯ ಆಯುಸ್ಸು, ಐಶ್ವರ್ಯ ಈ ಮೂರನ್ನು ಪಡೆದು ಸುಖ ಶಾಂತಿಯಿಂದ ಕೌಟುಂಬಿಕ ಜೀವನವನ್ನು ನಡೆಸುತ್ತಾ ಎಲ್ಲರಿಗೂ ಬೇಕಾದವರಾಗಿ, ಹರಿಗುರು ಭಕ್ತರಾಗಿ ಎಲ್ಲ ಕಿರಿಯರಿಗೆ, ಹಿರಿಯರಾಗಿ ಸಂತೃಪ್ತಿಯಿಂದಿದ್ದಾರೆ. ಇವರ ಪತ್ನಿ ಹ॥ಕುಂ॥ ವೈಜಯಂತೀಬಾಯಿ (ಕಡ್ಡೀ ಸತ್ಯವತೀ ಬಾಯಿ) ಇವರಿಗೆ ೮ ಹೆಣ್ಣು ಮಕ್ಕಳು ಇಬ್ಬರು ಗಂಡು ಮಕ್ಕಳಿದ್ದು ಇವರೆಲ್ಲರೂ ಸದ್ ಗೃಹಿಣಿಯರು ಮತ್ತು ಸದ್ ಗೃಹಸ್ಥರಾಗಿ, ಭಗವತ್ ಭಕ್ತರಾಗಿ ಇರುತ್ತಾರೆ. ಗಂಡು ಮಕ್ಕಳು ಉನ್ನತ ಹುದ್ದೆಯಲ್ಲಿದ್ದು, ಎಲ್ಲರೂ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಈಗಲೂ ಇವರ ರಚನೆಗಳನ್ನು ಇವರ ಮನೆಯಲ್ಲಿ ಪೂಜಾ ಕಾಲದಲ್ಲಿ ಮತ್ತು ಸಂಧ್ಯಾ ಕಾಲದಲ್ಲಿ ಎಲ್ಲರೂ ಹಾಡುವ ಸಂಪ್ರದಾಯವಿದೆ. ಇವರ ಜೀವನದಲ್ಲಿ ದೇವರು ನಡೆಸಿದ ಘಟನೆಗಳನ್ನು "ಸಂದಿತು ಅರವತ್ತು ವರ್ಷ ಈ ಕಾಯಕ್ಕೆ" ಎಂಬ ಕೃತಿಯಲ್ಲಿ ಸೂಕ್ಷ್ಮವಾಗಿ ತಿಳಿಸಿರುತ್ತಾರೆ. ಇವರ ಪರಿಚಯವುಳ್ಳ ಜನರೆಲ್ಲರೂ ಇವರನ್ನು ನಮ್ಮ ಕಾಲದ ಪುರಂದರದಾಸರು ಎಂದು ಅಭಿಪ್ರಾಯಪಟ್ಟಿದ್ದಾರೆ ಹಾಗೂ ಪೂಜ್ಯ ಭಾವದಿಂದ ಗೌರವಿಸುತ್ತಿದ್ದಾರೆ. ಶ್ರೀ ಶ್ರೀನಿವಾಸ ದಾಸರು ತಮ್ಮ ಕೃತಿಗಳ ಬಗ್ಗೆ ಅವರೇ ಒಂದು ಕೃತಿಯಲ್ಲಿ "ತತ್ವೇಶರು ನಿಂದು ನುಡಿಸಿದ ಪದವಿದು। ಪಥ್ಯವಾಗ್ವುದು ನಂಬಿ ನಡೆವರಿಗೇ। ಸತ್ಯ ಮಾಡುವ ನಿಜಭೃತ್ಯರ ವಚನವ। ಕರ್ತೃ ಉಡುಪಿ ಕೃಷ್ಣ-ಶ್ರೀನಿವಾಸ" ಎಂದಿರುವುದನ್ನು ಉಲ್ಲೇಖಿಸಿ ವಿರಮಿಸುತ್ತೇವೆ. ॥ ಇತಿ. ಶಂ॥

**ಶ್ರೀಮತಿ ಕಡ್ಡಿ ವಾರುಣಿ ಜಯತೀರ್ಥಾಚಾರ್ ಮತ್ತು**
**ಶ್ರೀಮತಿ ಕಟ್ಟೆ ಭಾರತಿ ಶ್ಯಾಮಣ್ಣ**
ಮಲ್ಲೇಶ್ವರಂ, ಬೆಂಗಳೂರು.

## ॥ ಶ್ರೀಸಿದ್ಧಿ ವಿನಾಯಕಸ್ವಾಮಿಯ ಸ್ತುತಿ-ಪದ ॥

ರಾಗ : ಹಂಸಧ್ವನಿ ತಾಳ : ಆದಿತಾಳ

ಸಿದ್ಧಿ ವಿನಾಯಕ । ನಂಬಿದೇ ।
ಬುದ್ಧಿಜ್ಞಾನ ಬಲ ಸಂಪತ್ । ಪ್ರದಾಯಕ....॥ ॥ ಪ ॥

ಕ್ಷುದ್ರ ವಿಷಯದ ಉ । ಪದ್ರ ಬಿಡಿಸಿ ನೀ।
ಭದ್ರ ಮೂರುತಿಯೇ ಸು।ಭದ್ರ ಮತಿಯನೀಯೋ॥ಅ.ಪ॥

ಮೇನಕಾತ್ಮಜೆಗೆ । ಅಂಗಸಂಭವ ।
ದೀನ ಶರಣರಿಗೆ । ಕೊಡುವೆ ವೈಭವ ॥
ಷಾಣ್ಮಾತುರನಿಗೆ । ಅಗ್ರಜನೆನಿಸುವ ।
ಜಾಣಕುವರ ಮು । ಕ್ಕಣ್ಣಗೆಂದೆನಿಸುವ ॥ ॥ ೧ ॥

ಸುರರಪಂಗ್ತಿಯಲಿ । ಮೆರೆವ ಮಹಾಮಹಿಮ ।
ಅರಿಯಬಲ್ಲೆನೇ । ನಿನ್ನಯ ಮರ್ಮ ॥
ತೊರೆಯಲು ನಿನ್ನನು । ಪೂಜಾ ಧರ್ಮ ।
ದೊರಕಿಸಲಾಪುದೇ । ಫಲಸಿದ್ಧಿ ಕರ್ಮ ॥ ॥ ೨ ॥

ಈಶಪುತ್ರ ಎನ್ನ । ಘಾಸಿಗೊಳಿಸದೆಲೆ ।
ಪೋಷಿಸಬೇಕೆನ್ನ । ಈ ಕ್ಷಣದೀ ॥
ವಾಸವವಂದಿತ । ಶ್ರೀನಿವಾಸನಾ..... ।
ದಾಸರ ಸಲಹೋ । ನಿಸ್ಸೀಮ ಬಲಾಢ್ಯಾ....... ॥ ೩ ॥

* * * * *

## ॥ ಶ್ರೀ ಪಾರ್ವತೀ ದೇವಿಯವರ ಸ್ತುತಿ ಪದ ॥

ರಾಗ : ಅಸಾವೇರಿ ತಾಳ : ಆದಿತಾಳ

("ಮನುಜಶರೀರವಿದೇನು.... ಸುಖ" ಎಂಬ ಹಾಡಿನಂತೆ)

ಶ್ರೀ ಶಾಕಾಂಬರಿ । ನಮೋ...... ನಮೋ । ॥ ಪ ॥
ಕೇಸರಿವಾಹಿನಿ । ನಮೋ ನಮೋ...... ॥ ಅ.ಪ. ॥

ಕಿಂಕರಪೋಷಿಣೀ । ಭಕುತಿ ಪ್ರದಾಯಿನೀ ।
ಶಂಕರಿ ಮೋಹಿನಿ । ನಮೋ ನಮೋ ॥
ಶಂಕಿಸದೆಮ್ಮಯ । ಮೊರೆಯನು ಲಾಲಿಪ ।
ಪಂಕಜಲೋಚನೆ । ನಮೋ ನಮೋ ॥ ॥ ೧ ॥

ನೆರೆನಂಬಿಹ ಈ । ಭಕುತ ವೃಂದವಾ ।
ನಿರುತದಿ ಕಾವುದು । ನಮೋ ನಮೋ ॥
ಶರಣ ಜನರ ಸಂ । ತಾಪಗಳ್ಹರಿಸುವ ।
ಗರಳಧರನ ಸತಿ । ನಮೋ ನಮೋ.... ॥ ॥ ೨ ॥

ದಾನವ ಕುಲ । ವಿಧ್ವಂಸಿನಿ ಚಂಡಿಕೆ ।
ಮೈನಾವತಿ ಶಿವೆ । ನಮೋ ನಮೋ ॥
ಶ್ರೀನಿವಾಸನಾ । ಹೃದಯದಿ ನಿಲಿಸಿಹ ।
ಬನಶಂಕರಿ ಇದೋ । ನಮೋ ನಮೋ ॥ ॥ ೩ ॥

* * * * *

### (ಕೃತಿ)

ರಾಗ : ಜಯಂತಿ ಶ್ರೀ ತಾಳ : ಆದಿತಾಳ

("ಮರುಗೇಲರಾ ಓ ರಾಘವ" ಎಂಬ, ಕೀರ್ತನೆ ರಾಗ)

ಗೌರಿಪಾಲಿಸೇ.... । ಸುಮನೋಹರೀ.... । ॥ ಪ ॥
ಶೌರಿ ಸೋದರೀ.... । ಕಂಬುಕಂಧರೀ... ।
ಸಾರಿ ಬಂದೆನೇ... ಏ । ಕಾಂಬರೀ... ದೇವಿ ॥ ಅ.ಪ. ॥

ರಕ್ಕಸರ ಸೊಕ್ಕ । ಮುರಿದ ಶಕ್ತಿದೇವಿ ।
ಇಕ್ಕಿ ದಿವ್ಯ ಜ್ಞಾನ । ಭಕ್ತಿ ನೀಡೆಲೇ ॥
ಮುಕ್ತಿದಾಯಕ.... । ಶ್ರೀನಿವಾಸನಂಘ್ರಿ ।
ಯುಕ್ತಿಯಿಂದಲೀ । ಭಜಿಪ ಭಾಗ್ಯವಿತ್ತು ॥ ॥ ೧ ॥

* * * * *

## ॥ ಶ್ರೀ ಶಂಕರ (ಮಹಾರುದ್ರ ದೇವರ) ಸ್ತುತಿ ಪದ ॥

ರಾಗ : ಕಾನಡ (ದರ್ಬಾರೀ ಕಾನಡ) ತಾಳ : ಆದಿತಾಳ

ಆನಮಿಸುವೆ ಪ್ರಭೋ... ಶಂಕರಾ । ॥ ಪ॥
ಅನಿಮಿಷ ಜನರೊಡೆಯಾ ದಿಗಂಬರ ॥ ॥ ಅ.ಪ ॥

ದೀನಜನೋದ್ಧರ । ಚಂದ್ರಕಳಾಧರ ।
ದಾನವ ವಂಶ । ಕುಠಾರ.... ವಿಹಾ...ರ ॥
ಪಿನಾಕಿ ಧನುಕರ । ಗಜಚರ್ಮಾಂಬರ ।
ಮೈನಾವತಿ ಹೃದಯಾಂಬರ ಚಂದಿರ....... ॥ ೧ ॥

ದ್ರೋಣಾತ್ಮಜ, ಶುಕ । ಗಜಮುಖ ತಾತ ।
ಏಣಾಂಕನ ಸತಿ-ತಾತವಿಘಾತ ॥
ಪೋಣಿಸು ಈ ಮನ । ಕಾಣಿಸುಹರಿಪದ ।
ಮಾಣಿಸು ದೋಷವ । ಪ್ರಾಣಪತಿ ಪ್ರಿಯ...... ॥ ೨ ॥

ಕಂದ ಮಾರ್ಕಂಡನ । ಮೃತ್ಯು ತಪ್ಪಿಸಿದಿ ।
ಕೊಂದೊಗೆಯುವ ವಿಷ । ವುಂಡು ಜೀರ್ಣಿಸಿದಿ ॥
ಕಂದರ್ಪನ ಉರಿ । ಗಣ್ಣಿಲಿ ಕೊಂದೀ ।
ವಂದಿಪಜನರಘ । ದೂಡೀ ಸಲಹಿದೀ....... ॥ ೩ ॥

ಘೋರಸಂಸಾರದ । ಭಯಪರಿಹಾರಕ ।
ತಾರಕ ಪ್ರೇರಕ । ಶುಭಫಲದಾಯಕ ॥

ಆರಾ-ಧಿಸುವೆಯೋ । ರಾಮತಾರಕಾ.... ।
ವಾರಣಾಸಿಯೊಳು । ಪ್ರಳಯದ ತನಕಾ....... ॥ ೪ ॥

ಗಂಗಾಧರ ನಟರಾಜ ಸುತೇಜ ।
ಸಂಗೀತಪ್ರಿಯ । ಮಾಡುವೆ ಪೂಜಾ ॥
ಮಂಗಳ ಮೂರುತಿ । ಶ್ರೀನಿವಾಸನ ಪದ ।
ಹಿಂಗದೆ ಭಜಿಸುವ । ಭಾಗ್ಯವನೀಯೋ ॥ ೫ ॥

* * * * *

## ॥ ಶ್ರೀ ಭಾರತೀದೇವಿಯ ಸ್ತುತಿ ಪದ ॥

ರಾಗ : ಹಿಂದೋಳ್ (ಮಾಲಕಂಸ ಉತ್ತರಾದಿ) ತಾಳ:ಆದಿತಾಳ

ಭಾವಜಾರಿವಂದಿತಪದ ಯುಗ್ಮಳೆ ।
ಕಾವುದೆಮ್ಮ ಬಿಡದೇ ವರದೇ ॥
ಭಾವಜಾರಿ ವಂದಿತಪದಯುಗ್ಮಳೆ ಕಾವುದೆಮ್ಮ ಬಿಡದೇ
॥ ಪ ॥

ಭಾವ ಭಕುತಿಯಲಿ ಭಜಿಪ ಸಜ್ಜನರ ।
ಸೋವಕಳೆದು ಸುಖವೀವ ಭಾರತಿಯೇ ॥ ॥ ಅ.ಪ. ॥

ಕೃತಿ ರಮಣನಸುತೆ ಅತಿ ಹಿತದಿಂದಲಿ ।
ಮತಿವಂತನ ಮಾಡೇ ।
ಕ್ಷಿತಿಯೊಳು ದಿತಿಜರ ಖತಿಗೊಳಗಾಗಿಹೆ ।
ಮತಿವಂತಳೆ ಕಾಯೇ ॥
ಜತನಮಾಡು ಎನ್ನವಗುಣ ಎಣಿಸದೆ ।
ಗತಿ ತೋರಿಸು ತಾಯೇ ।
ನುತಿಸುವೆ ನಿನ್ನಡಿ ಪರಿಪರಿ ವಿಧದಲಿ ।
ದಿತಿಜಾಂತಕೆ ಸತ್ಪಥ ಸಂಚಾರಿಣಿ ॥ ॥ ೧ ॥

ಶ್ರದ್ಧಾಹ್ವಯೆ ಅನಿರುದ್ಧನ ತೋರಿಸೆ । ಶುದ್ಧ ಬುದ್ಧಿಧಾತೇ ।
ಶುದ್ಧಗೊಳಿಪೆ ಸಜ್ಜೀವರ ಕರಣವ ।
ಮಾತರಿಶ್ವನ ದಯಿತೇ ॥
ಕದ್ದು ಪೋಪಮನ-ತಿದ್ದಿ ಸನ್ಮತದ। ಪದ್ಧತಿಯೊಳು ಇರಿಸೇ।
ಕೃದ್ಧಳಾಗಿ ದ್ವಾಪರದಲಿ ಖಳಬಲ ।
ಸದ್ದಿಲ್ಲದೆ ನಿರ್ನಾಮಗೈಸಿದೆಯೇ ॥ ॥ ೨ ॥

ಮಂಗಳಾಂಗಿ ಋಜುಪುಂಗವ ನರಸಿಯೆ ।
ಹಿಂಗಿಸು ಈ ಭವವ ॥
ಭಂಗಾರದ ಶುಭ ವರ್ಣಾಳಿ ತೋರ್ಪುದು ।
ಮುಕ್ತಿಗೆ ನಿಜಪಥವಾ ॥
ಅಂಗನೆಯರ ಮಣಿ ಎನ್ನವಾಣಿಯಲಿ ।
ನಿಂತು ಕೊಡಿಸು ಜಯವಾ ।
ಭಂಗರಹಿತ ಶ್ರೀನಿವಾಸನ ನಿಜಪದ ।
ಸಂಗಿಯಮಾಡಿ ಸೌಭಾಗ್ಯವ ಬೆಳೆಸೇ ॥ ॥ ೩ ॥

* * * * *

## ॥ ಶ್ರೀ ಸರಸ್ವತೀದೇವಿಯ ಸ್ತುತಿ ಪದ॥

ರಾಗ : ಕಾಪಿ ತಾಳ : ಆದಿತಾಳ

ಕರವ ಮುಗಿದು ಬಾಯ್ ತೆರೆದು ಬೇಡುವೆನು ।
ವದನದಿ ನಲಿದಾಡೇ । ವಾಗ್ದೇವಿಯೇ ।
ವದನದಿ ನಲಿದಾಡೇ ॥ ॥ ಪ ॥

ವಾರಿಜೋದ್ಭವನ ರಾಣಿಯೆ, ವಾಣಿಯೇ ।
ತಾರಿಸುಭವವ, ನಿ । ವಾರಿಸು ದುರ್ಮತಿ॥ ॥ ಅ.ಪ. ॥

ಮಂದಹಾಸೆ ಸುರವೃಂದ ಸುಪೂಜಿತೆ ।
ಸುಂದರ ಶುಭವದನೇ । ಸುನಯನೇ ।

ಸುಂದರ ಶುಭವದನೇ.... ||
ಚೆಂಮಟಿ ಕಂಕಣೆ, ವೀಣಾಧೃತಕರೆ |
ಅಂದುಗೆ ಪದಯುಗಳೇ |
ನೂಪುರಳೇ | ಅಂದುಗೆ ಪದಯುಗಳೇ ||
ಇಂದಿರೆಯರಸನ | ಹಿರಿಯ ಸೊಸೆಯೆ, ನೀ |
ಕಂದನ ಮತಿಯಲಿ | ಚಿಮ್ಮಿಸು ಭಕುತಿಯ || || ೧ ||

ಪ್ರಕೃತಿ ಪ್ರಧಾನೆ, ಪ್ರಸನ್ನೆ ಸರಸ್ವತಿ |
ಕೃತಿಪತಿ ತನುಜಾತೇ | ವಿಖ್ಯಾತೇ |
ಕೃತಿಪತಿ ತನುಜಾತೇ ||
ಗತಿ ಕಾಂಬರು ಸೌಪರ್ಣೀವಾರುಣಿ ಉಮೆ |
ಶಚಿಪತಿ ಮುಖಸುರರು | ಭವಾದ್ಯರು |
ರತಿಪತಿ ಮುಖ ಸುರರು ||
ತುತಿಪುದು ಬುದ್ಧ್ಯಭಿಮಾನಿಯೆ ಬುಧತತಿ |
ಶೃತಿ ಪ್ರತಿಪಾದ್ಯನಕಾಂಬುವ ತವಕದಿ || || ೨ ||

ಮೋದಭರಿತೆ ತವಪಾದಕೆರಗುವೆನು |
ಹೃದಯ ಶ್ರೀಹರಿಧರಿಸೇ | ನೆಲಸೇ |
ಹೃದಯದಿ ನೀ ನೆಲಸೇ ||
ಮೋದ ತೀರ್ಥಕೃತ ಭಾಷ್ಯಾದಿಗಳಲಿ |
ಫಲಉಂಬುದ ತಿಳಿಸೇ |
ಫಲ ಉಂಬುದ ಕಲಿಸೇ ||
ವೇದಮತದಿ ಶ್ರೀನಿ | ವಾಸನ ಹಿರಿತನ |
ಸಾಧಿಸಿ ಶೋಧಿಸಿ, ಮೋದಿಸಿ ಪಾಡಲು || || ೩ ||

* * * * *

## ॥ ಶ್ರೀ ಪ್ರಾಣದೇವರ ಸ್ತುತಿ ಪದ ॥

ರಾಗ : ಜಯಮನೋಹರೀ ತಾಳ : ಆದಿತಾಳ

ಶರಣು ಶರಣು ಶ್ರೀ ಭಾಗವತೋತ್ತಮ ।
ಶರಣು ಶರಣು ಹೊಸ-ಹಳ್ಳಿಯ ಹನುಮಾ ॥ ॥ ಪ॥
ಭಾರತೀಶ ಮುಖ್ಯ । ಪ್ರಾಣ ಸುನಾಮಾ... ।
ನಿರುತ ನೆನೆವೆ ನಿನ್ನ । ಮಂಗಳ ಮಹಿಮಾ.....॥ ಅ.ಪ.॥

ವನಚರನೆಂದೆನಿಸಿ । ವನನಿಧಿ ದಾಂಟಿದೀ ।
ವನಿತೆ ಗುಂಗುರವಿತ್ತು । ವನಸಿರಿ ಕೆಡಿಸಿದೀ ॥
ಬಣಗು ದೈತ್ಯರ ಮುರಿದು । ಅಕ್ಷ ದೈತ್ಯನ ಕೊಂದಿ ।
ದನುಜೇಂದ್ರನಾ ಪುರವಾ । ವಹ್ನಿಗಾಹುತಿ ಇತ್ತೀ ॥ ೧ ॥

ಒಡೆಯ ಶ್ರೀರಾಮನಿಗೆ । ಮಡದಿ ಕುರುಹನಿತ್ತೇ ।
ಪಡೆಯುಬದುಕೆ । ಸಂಜೀವಿನಿ ತಂದೇ ॥
ಒಡೆಯನ ನುಡಿಸಲಿಸೆ । ಭರತನ ತಲೆಗಾಯ್ದೇ ।
ಪೊಡವಿ ಪತಿಗೆ ನಿಜ । ದೂ-ತ-ನೆಂದೆನಿಸಿದೇ....॥ ೨ ॥

ದ್ವಾಪರದಲಿ ಬಲ । ಭೀಮರೂಪವ ತಾಳೀ ।
ತಾಪವ ಕಳೆದ್ಯೋ । ಸಹ ಭವರಾ... ॥
ದ್ರೌಪದಿಗೆಳಸಿದಾ । ನೀಚ ದೈತ್ಯರ ಕೊಂದು ।
ಭೂಪಶ್ರೀಕೃಷ್ಣನ । ಕಾರ್ಯ ಸಾಧಕನಾದೀ..... ॥ ೩ ॥

ಅಚ್ಯುತನಾಜ್ಞದಿ । ಮಧ್ವಗುರುವೆ ನೀ ।
ಹೆಚ್ಚಿರೆ ಕಲಿಬಲ । ರಾಜ್ಯದೊಳು ॥
ತುಚ್ಛರ ಮತ ಮುರಿದು । ಸ್ವಚ್ಛ ಭಾಷ್ಯವ ಬರೆದು ।
ಅಚ್ಯುತಗರ್ಪಿಸೀ । ಕೃಷ್ಣನ್ನ ಸ್ಥಾಪಿಸಿದೀ ॥ ೪ ॥

ವಂದಿಪ ಜನರಿಗೆ । ಅಘ ಪರಿಹಾರ ।
ನಿಂದಿಪರಿಗೆ ನೀ । ಕ್ರೂರ ಕುಠಾರ.... ॥

ಸಂದೇಹವಿಲ್ಲವೋ । ಹರಪುರಿ, ನಿಲಯ ।
ಕುಂದದೆ ಪೊರೆಯೆಮ್ಮ। ಶ್ರೀ.....ನಿವಾಸನ ಪ್ರಿಯ ॥ ೫ ॥

* * * * *

## ॥ ಶ್ರೀ ಪ್ರಾಣದೇವರ ಸ್ತುತಿ ಪದ ॥

ರಾಗ : ಸರಸ್ವತೀ ತಾಳ : ಆದಿತಾಳ

ವಾತಾತ್ಮಜ...... । ದ್ವಿಜ ರಾಜತೇಜ ।
ಸುರಕಲ್ಪ ಭೂಜ । ಅಂಜನೀ ತನೂಜ... ॥ ಪ ॥

ಸುಗುಣಾನ್ವಿತ.... । ರಘು ರಾಮದೂತ... ।
ಜಗತ್ಪ್ರಾಣದಾತಾ । ಭುವಿಯೋಳ್ ಪ್ರಖ್ಯಾತ.... ॥ಅ.ಪ.॥

ಹನುಮ ಭೀಮ ಮಧ್ವ । ರೂಪತಾಳಿ ಬಂದ್ಯೋ ।
ದನುಜ ಕೌರವರ ಹಣಿದು । ಮುರಿದು ಮೆರೆದ್ಯೋ ॥
ಶ್ರೀನಿವಾಸನಾ... ಬಿಡದೆ । ಭಜಿಪ ದಾಸ ।
ಜನರ ಪೊರೆಯೆಭುವಿಯೋಳ್ । ಸ್ಥಿರವಾಗಿ ನಿಂದೇ.......
॥ ೧ ॥

* * * * *

## ॥ ಶ್ರೀ ಪ್ರಾಣದೇವರ ಸ್ತುತಿ ಪದ ॥
## ॥ ಶ್ರೀ ಮಧ್ವಕವಚ ॥

ರಾಗ : ಆರಭಿ ತಾಳ : ಆದಿತಾಳ

(ಸ್ಮರಿಸಿ ಬದುಕಿರೋ ದಿವ್ಯಚರಣಕೆರಗಿರೋ-ಎಂಬಂತೆ)

ಪೊಂದಿ ಬದುಕಿರೋ । ಮಧ್ವಗುರುವರೇಣ್ಯರಾ ।
ಬಂಧ ಕಡಿಮ ಹರಿಯ ಕರುಣೆ । ಕೊಡಿಸಿ ಪೊರೆವರಾ
॥ ಪ ॥

ಶ್ವಾಸಜಪಗಳಾ ಮಾಡಿ । ಪ್ರಾಣಿ ಹೃದಯದೀ ।
ಶ್ರೀಶಗರ್ಪಿಸೀ ಜಗವ । ಪೊರೆವ ದಯದಲೀ ॥
ಕುಜನ ಭಂಜರೋ, ಇವರು । ಸುಜನ ವಂದ್ಯರು ।
ಅಜನಪದವಿಯಾ ಪಡೆವ । ಋಜುಗಣೇಶರು ॥
ತ್ರಿವಿಧ ಜೀವರಾ ಲಿಂಗ । ದೇಹ ಕಳೆವರು ।
ತ್ರಿವಿಧ ರೂಪರು ಹರಿಗೆ । ಪ್ರೇಮ ಪಾತ್ರರು ॥
ಮಂದನಾದರೂ, ಇವರ । ಪೊಂದಿ ಭಜಿಸಲು ।
ಕುಂದ ನೋಡದೇ । ಪೊರೆವ ಇಂದಿರಾಪತಿ ॥
ಈತನೊಲಿಯಲು ಹರಿಯು । ಒಲಿದು ಪಾಲಿಪ ।
ಈತ ಮುನಿದರೆ ಹರಿಯು । ಮುನಿದು ಘಾತಿಪ ॥
ಕೋತಿ ರೂಪದೀ ಸೀತೆ । ವಾರ್ತೆ ತಂದನಾ ।
ಖ್ಯಾತರಾಮನಾ ದೂತ । ನೆನೆಸಿ ಮೆರೆದನಾ ॥
ಕೃಷ್ಣನ ಸೇವೆಗೇ ಜನಿಸಿ । ಭೀಮ ರೂಪದೀ ।
ಕೃಷ್ಣೆಯ ಕೆಣಕಿದಾ ಖಳರ । ಮುರಿದ ರಣದಲೀ ॥
ಧರ್ಮರಾಜಗೇ । ಪಟ್ಟಗಟ್ಟಿ ಮೆರೆಸಿದಾ ।
ನಿರ್ಮಲಾತ್ಮಕನಾಗಿ । ಹರಿಯ ವಲಿಸಿದಾ ॥
ಕಲಿಯು ಹೆಚ್ಚಿದಾ ಯುಗದಿ । ವಲಿದು ಸುರರಿಗೇ ।
ಇಳಿದು ಬಂದರೋ ಧರೆಗೆ । ಮಧ್ವರೂಪದೀ ॥
ಶ್ರದ್ದೆಯಿಂದಲೀ । ಮಧ್ಯಗೇಹ ವಿಪ್ರರು ।
ಶುದ್ಧ ವ್ರತದಲೀ ಇರಲು । ವೇದವತಿ ಸತಿ ॥
ಮದನ ಮೋಹನಾ ರೂಪ । ಧರಿಸಿ ಬಾಲ್ಯದೀ ।
ಮುದವನಿತ್ತರೋ ಲೀಲೆ । ಗೈದು ಪರಿ ಪರೀ ॥
ಸರ್ಪರೂಪದಾ ಖಳನ । ಮೆಟ್ಟಿಕೊಂದನು ।
ಬರ್ಪಕ್ಲೇಶವ ಕಳೆದು । ಜನರ ಪೊರೆದನು ॥

ಕುಹಕ ಮತಗಳಾ । ಮುರಿಯೆ ಯತಿಯು ಆದನು ।
ಇಹದಿ ಸುಮತವಾ ಮೆರೆಸೆ । ಭಾಷ್ಯ ಬರೆದನು ॥

ಪರಕೆ ಸತ್ಪಥ ತೋರ್ವ । ಗ್ರಂಥ ನಿರ್ಮಿಸೀ ।
ಧರೆಯೊಳದ್ಭುತನೆನಿಪ । ಜ್ಞಾನ-ಬಲದಲೀ ॥

ಪ್ರಾಣನಾಥನು ಭುವಿಗೆ । ತ್ರಾಣದಾತನು ।
ಜಾಣೆ ಭಾರತೀರಮಣ । ಪೂರ್ಣ ಪ್ರಜ್ಞನು ॥

ಚೆಲುವ ಕೃಷ್ಣನಾ ಯಜಿಸಿ । ನಿಲಿಸೆ ಉಡುಪಿಯು ।
ಇಳೆಯ ಜನರಿಗೇ ವೈ । ಕುಂಠವೆನಿಸಿತು ॥

ಶ್ರದ್ಧೆಯಿಂದಲೀ ಪಠಿಸೆ । ಮಧ್ವಕವಚವಾ, ಹರಿಯು ।
ವೃದ್ಧಿ ಮಾಳ್ಪನು ಜ್ಞಾನ । ಆಯು ಶಿರಿಗಳಾ ॥

ನಾಕಪತಿ ಭವಾದ್ಯಮರವಂದ್ಯ ಪಾದರು । ಇವರು ।
ಆಖಣಾಶ್ಮರು ಶ್ರೀನಿವಾಸ ಭಜಕರು ॥

ಇತಿ ಶ್ರೀ ಮಧ್ವಕವಚಂ ಸಂಪೂರ್ಣಂ ॥ಶ್ರೀ ಕೃಷ್ಣಾರ್ಪಣಮಸ್ತು॥

* * * * *

## ॥ ಶ್ರೀ ಲಕ್ಷ್ಮೀದೇವಿಯ ಸ್ತುತಿ ಪದ ॥

ರಾಗ : ಕಮಾಚ್ ತಾಳ : ಆದಿತಾಳ

ಕರವೀರ ಪುರವಾಸಿನೀ...... ಅಂಬಾ । ॥ ಪ ॥
ಪೊರೆಯೆಮ್ಮ ಜಗನ್ಮೋಹಿನೀ..... ॥ ತಾ......ಯೇ ॥ ಅ.ಪ ॥

ಅಕಳಂಕಚರಿತಳೇ । ಸಕಲೇಷ್ಟದಾಯಕೀ ।
ಮಕರ ಕುಂಡಲ ಶೋಭಿತೇ ॥
(ಮಕರ ಕುಂಡಲ ಶೋಭಿತೇ) ॥
ಮುಕುಟ ಮಣಿಭೂಷೆ । ಅಖಿಳಾಂಡ ನಾಯಕೀ ।
ಸಕಲಾಗಮ ಸನ್ನುತೇ... ॥ ॥ ೧ ॥

ಕಂಜನಯನೆ । ಕಂಜಾಸನ ಜನನಿಯೇ ।
ಕಂಜನಾಭನ ರಾಣಿಯೇ..... । ಕಂಜನಾಭನರಾಣಿಯೇ ॥
ಅಂಜಿಪ ಈ ಭವವ । ಭಂಜಿಸಿ ಕಾಯೆಮ್ಮ ।
ಕಂಜ ಭವನೆ ಪದ । ಕಂಜಕ್ಕೆರಗುವೆನೆ ॥ ॥ ೨ ॥

ಮಾನದಾತೆ ಮಹಿ । ಮೋನ್ನತೆ ಪಾಲಿಸೆ ।
ಶ್ರೀನಿವಾಸನ ದಯಿತೇ... । ಶ್ರೀನಿವಾಸನದಯಿತೇ ॥
ಅನಮಿಸುವೆ ನಿನ್ನರ್ಚಿಸಿ । ಬೇಡುವೆ।
ದೀನತೆ ಬಿಡಿಸಿ ಶ್ರೀ । ಕೃಷ್ಣನ್ನ ತೋರಿಸೇ...... ॥ ೩ ॥

* * * * *

## ॥ ಶ್ರೀ ಲಕ್ಷ್ಮೀದೇವಿಯ ಸ್ತುತಿ ಪದ ॥

ರಾಗ : ಆನಂದ ಭೈರವಿ ತಾಳ : ಆದಿತಾಳ

ಬಾ ಬಾ ಚಂದ್ರಮುಖೀ । ಸುಪೀಠಕೆ ।
ಬಾ ಬಾ ಚಂದ್ರಮುಖೀ ॥ ॥ ಪ ॥

ಮಂಗಳೆ ಗೌರಿ । ಶುಭಂಗಳ ನೀವಳೇ ।
ಭಂಗಕಳೆದು ಶಿರಿ । ರಂಗನ ಅರಸಿಯೇ ॥ ॥ ಅ.ಪ ॥

ಅಂಬುಜವದನೆಯೆ ಬಾ । ಸಂಭ್ರಮದಿ ।
ಅಂಬುಜ ಸದನೆಯೆ ಬಾ ॥
ನಂಬಿದ ಭಕ್ತರ । ಬೆಂಬಿಡದೆಲೆ ಕಾಯ್ವ ।
ಅಂಬೋರುಹೆ । ಪತಿಯಂಘ್ರಿಗಳಿಗೆರಗಿ ॥ ॥ ೧ ॥

ಕುಂಜರಗಮನೆಯೆ ಬಾ । ಮೋದಕರೆ ।
ಕಂಜಾಕ್ಷಿಯೆ ನೀ ಬಾ ॥
ಕುಂಜರವರದನ । ಪ್ರೇಮದಿಂದೊಲಿಸಿದ ।
ಕಂಜನಾಭ ಹೃತ್ । ಪಂಜರವರಗಿಳಿ ॥ ॥ ೨ ॥

ಪಾಲಕಡಲಜಾತೇ । ಶ್ರೀ ರುಕ್ಮಿಣಿ ।
ಬಾಲೇ ಧರಣಿ ಜಾತೇ ॥
ಶೀಲ ಮೂರುತಿ ನಮ್ಮ । ಶ್ರೀನಿವಾಸನ ಪ್ರಿಯೆ ।
ಮೂರ್ಲೋಕಕೆ ಶುಭ । ಮಂಗಳವೀಯಲು ॥ ॥ ೩ ॥

* * * * *

(ಶ್ರೀ ನಾರಾಯಣನ ॥ ಸ್ತುತಿಪದ॥)

## ॥ ದೇವರ ನಾಮಗಳು ॥

ರಾಗ : ಪಹಾಡಿ ತಾಳ : ಆದಿತಾಳ

ನರಹರಿ ನಿನ್ನ । ರೂಪವ ತೋರೋ ।
ದರಹಸಿತ । ಸುಂದರ ಬಾರೋ....... ॥ ॥ ಪ ॥

ಇಂದಿರೆ ರಮಣ ಪು । ರಂದರ ವಂದ್ಯ, ಗೋ, ।
ಬೃಂದವ ಪಾಲಿಪ । ಸುಂದರನೇ ॥
ಇಂದು ನಿನ್ನನು ನಾನು । ಚಂದದಿಂದಲಿ ಕರೆವೆ ।
ಕುಂದೆಣಿಸದೆ, ಕಾಯೋ । ಸಿಂಧು ಶಯನ ಹರಿ ॥ ೧ ॥

ಸರುವಂತರಾತ್ಮಕ । ಸರುವಸ್ಥಳದಿವ್ಯಾಪ್ತ ।
ಶರ್ವಾದಿ ಸುರವಂದ್ಯ । ಮೊರೆ ಇಡುವೇ ॥
ಕರುಣೆಯಿಂದಲಿ ನಿಜ । ಶರಣರ ಪೊರೆವಂಥ ।
ಕರುಣೆ ಎನ್ನಲಿ ತೋರೋ । ತರಳಾನ ಪೊರೆಯಲು
॥ ೨ ॥

ಭಾಸುರಾರ್ಕ ಕೋಟಿ । ಭಾಸ ಸರ್ವೇಶನೇ ।
ಮೀಸಲಾಗಿದೆ ಎನ್ನ । ಅಸು ನಿನಗೇ ॥
ದಾಸಜನಗಳಿಗುಲ್ಲಾಸ । ಕೊಡುವಂಥ ।
ಶ್ರೀಶ ಶ್ರೀನಿವಾಸ । ಪೋಷಿಸಬೇಕೆನ್ನ ॥ ೩ ॥

* * * * *

## ॥ ಕೃತಿ ॥

(ಸೀತಮ್ಮ ಮಾಯಮ್ಮ ಎಂಬಂತೆ)

ರಾಗ : ಲಲಿತ (ವಸಂತ) ತಾಳ : ರೂಪಕ ತಾಳ

ಮೋಹನ್ನ ಬಾ-ರಯ್ಯಾ ।
ಮೋದಪಡಿಸಿ ಜಗದಿ ಪೊರೆಯೆ ॥ ॥ ಪ ॥
ಮೋಹಾನ್ವಿತ ವೈಚಿತ್ರ್ಯ । ವಿಷಯ ಸುಖದಿ ಮಗ್ನನಾಗೀ।
ಮೋಹವಾಂತು ಸ್ಥಿರವಿದೆಂದು ।
ಮೋಹನಾಂಗಿಯೊಡನೆ ಮೆರೆದೆ ॥ ॥ ಅ.ಪ ॥

ಧರಣೀಧವ ಸುಂದರನೇ । ಪರಮಾತ್ಮನೆ ಪಾವನಾಂಗ ।
ವರನಾರದ ಪೂಜಿತಪದ । ಪರತತ್ವ ಪ್ರಕಾಶ..... ॥
ಸುರಭೂರುಹ ಸುಜ್ಞಾನ । ವೆರೆದು ಕಾವುದೈಯ್ಯ ಬಿಡದೇ।
ನೆರೆದ ಪಾಪ ಹರಿಸಿ ಎನ್ನೊಳು ।
ಶ್ರೀನಿವಾಸ ಮರುಕದಿಂದ ॥ ॥ ೧ ॥

* * * * *

## ॥ ಕೃತಿ ॥

(ವರನಾರದ ನಾರಾಯಣ-ಎಂಬಂತೆ)

ರಾಗ : ವಿಜಯಶ್ರೀ ತಾಳ : ಆದಿತಾಳ

ರಘುನಾಥನ ಪಾದಾಂಬುಜ ಭಕುತೀ ।
ಸುಜ್ಞಾನದಾಯಕವೋ । ॥ ಪ ॥
ರಘುನಾ-ಥಾ-॥ ಪ ॥
ಖಗವಾಹನ ದುರಿತೌಘ ನಿವಾರಕನೇ ।
ನಿಗಮವಿನುತ ವರ ॥ ॥ ಅ.ಪ ॥

ದನುಜಾಂತಕ ಸುಗುಣಾನ್ವಿತ ।
ಜನಪಾಲಕ । ಶ್ರೀನಿವಾಸ ಪ್ರಭೋ ॥

ವನಜಾಸಂಭವಪಿತ, ಸುರನಮಿತಾ...... ।
ಸುಜ್ಞಾನಿಕಲ್ಪ ತರು ॥ ॥ ೧ ॥

* * * * *

## ॥ ಕೃತಿ ॥

(ನಿರವಧಿ ಸುಖದಾ ನಿರ್ಮಲ ರೂಪಂ -ಎಂಬಂತೆ)

ರಾಗ : ರವಿಚಂದ್ರಿಕೆ ತಾಳ : ಆದಿತಾಳ

ಕಲಿಮಲ ಹರಣಾ । ಕೌಸ್ತುಭಧಾರಣ ।
ಕಾಮಜನಕ ಶೌರೇ । ಮು.ರಾ.ರೇ..... ॥ ॥ ಪ ॥

ಭಾಳನಯನ ಕ । ಪಾಲಧರಾರ್ಚಿತ ।
ವಾಲಿಮಹಾಕುಲ ಪಾವನಗೈದ, ವಿ ।
ಶಾಲ ಲೀಲ ಲೋಲ ಕೃಪಾಲ ॥ ॥ ಅ.ಪ ॥

ಸುರಪತಿವಿನುತ । ನಿಗಮ ಸುಬೋಧಿತ ।
ಸಿರಿವರ ಧೊರೆ ಬಾರೋ। ಶೌರೇ...... ।
ಸಿರಿವರ ಧೊರೆ ಬಾರೋ ॥
ಸೂರಿ ಮನೋಹರ । ಶ್ರೀರಮಣೀ ವರ ।
ವಾರಿಜನಾಭ ಮನೋಹರ ಮೂರುತೆ ।
ಧೀರ ಶ್ರೀನಿವಾಸ ಗಿರೀಶ ॥ ॥ ೧ ॥

* * * * *

## ॥ ಕೃತಿ ॥

ರಾಗ : ಪೂರ್ವಿ ಕಲ್ಯಾಣಿ ತಾಳ : ಆದಿತಾಳ

ಕಮಲಾಕ್ಷ ಬಾ...... । ಸುಮನೋದ್ಧರಾ...... ।
ಕಮಲಾಪತೇ....... । ಭಜಿಫೆ ನಿನ್ನ ಚರಣ ॥ ॥ ಪ ॥

ಕಮಲಾಪ್ತ, ವಂ । ಶವಿರಾಜ ಮಾನ ।
ಕಮಲಾಸನಾ । ಭವವಂದ್ಯ ವಿನುತ ॥ ॥ ಅ.ಪ ॥

ಹಿಂದನೇಕ ಜನ್ಮ । ದಲ್ಲಿ ಗೈದ ಪಾಪ ।
ಬಂದು ಕಾಡುತಿರಲು । ಕಾಯ್ವರಾರೆಲೋ....... ॥
ಮಂದ ಭಾಗ್ಯರಂ । ಬಿಡದೆ ಕಾಯ್ವದೈವ ।
ವೆಂದು ಬಂದೆನೋ । ತಂದೆ ಶ್ರೀನಿವಾಸ ॥ ॥ ೧ ॥

* * * * *

## ॥ ದೇವರ ನಾಮ ॥

ರಾಗ : ಭಿಂಪಲಾಸ್ (ಅಭೇರಿ) ತಾಳ : ಆದಿತಾಳ

ಕರುಣಾಕರನಮಿಪೇ...... ॥ ಕಾ.....ಯೋ....... ॥ ಪ ॥
ಕರುಣಾರ್ಣವ ಸದ್ । ಗುಣ ಗಣ ಪೂರಣ ।
ಶರಣಾಗತ ರಕ್ಷಣ ಘನ ನಿಪುಣಾ... ॥ ॥ ಅ.ಪ ॥

ಪಂಕಜಾಲಯೆಪತೇ । ಪಂಕಜನಾಭಾ ।
ಪಂಕೇರುಹ ಪದ । ದ್ವಂದ್ವವ ತೋರ್ರೈ ॥
ಪಂಕಜಭವಪಿತ । ಪಂಕಜಲೋಚನ..... ।
ಪಂಕಜ ವದನಾ । ಪಂಕಜಪಾಣೀ....... ॥ ॥ ೧ ॥

ಮಂದರಧರ ಗೋ । ವಿಂದ ಮುಕುಂದನೇ ।
ಚಂದ್ರಶತಾನನ । ನಂದಕ ಹಸ್ತ ॥
ನಂದ ಮುನಿಗೊಲಿದು । ಶಿಲೆಯ ರೂಪದಿ ಬಂದು ।
ಚೆಂದದಿ, ಉಡುಪಿಲಿ । ಮೆರೆಯುತ ನಿಂದೇ ॥ ॥ ೨ ॥

ಜಯ ಜಯ ಜಯಶ್ರೀ । ವಿನುತ ಸುಹಾಸಾ..... ।
ಜಯ ಜಯ ಗೋಪೀ । ಮಾನಸ ಹಂಸ ॥
ಜಯ ಜಗನ್ನಾಯಕ । ನತಜನ ಪೋಷ ।
ಜಯಕಾರಕ ಶ್ರೀ । ನಿಧೆ, ಶ್ರೀನಿವಾಸ..... ॥ ॥ ೩ ॥

* * * * *

|| ಕೃತಿ ||

(ಎಂತನೇರ್ಚಿಸಾ ಎಂತ ಚೂಚಿನಾ ಎಂಬಂತೆ)

ರಾಗ: ಶುದ್ಧ ಧನ್ಯಾಸಿ ತಾಳ : ಆದಿತಾಳ

ಕರುಣಾ-ಕರ । ಮಾಂಪಾಲಯಾ..... ।
ಕರುಣಾ ಕಟಾಕ್ಷ । ದಿಂದೀಕ್ಷಿಸೆನ್ನ ॥ ॥ ಪ ॥

ದುರಿತಾಗ್ನಿಯಿಂ । ತೊಳಲಿ ನೊಂದೆನಯ್ಯಾ ।
ನೆರೆಗಾಣದೇ... । ಮೊರೆ ಹೊಕ್ಕೆ ಸ್ವಾಮೀ ॥ ॥ ಅ.ಪ ॥

ಪುರಹೂತ ವಂದ್ಯ । ಪುರಭಂಜನಾದಿ ।
ಸುರಮೋಹಕ ಗಾತ್ರ । ರೂಪಚಿನ್ಮಯಾ ॥
ಶರದೇಂದು ಸನ್ । ನಿಭವಕ್ತ್ರ ಕಾಯೋ..... ।
ಶರಣೆಂಬೆನಯ್ಯಾ । ಶ್ರೀನಿವಾಸ ರೇಯ ॥ ॥ ೧ ॥

* * * * *

|| ಕೃತಿ ||

ರಾಗ : ಷಣ್ಮುಖ ಪ್ರಿಯ ತಾಳ : ಆದಿತಾಳ

ನಮಿಪೆವು ಮಾನಸದಿಂ । ಯದುವರಾ.... ।
ಸುಮನಸರೊಡೆಯನೇ । ಕುಸುಮ ಶರನಪಿತ ॥ ಪ ॥

ತಾಮರಸಾಕ್ಷ । ಭಜಕಾ ಮರ ತರು ।
ಸೋಮಕುಲೋದ್ಭವ । ಸೋಮಚೂಡನುತ ॥ ಅ.ಪ ॥

ಪಾಪಾಂತಕ ಶ್ರೀನಿವಾಸ । ಮಹೇಶ್ವರ ।
ತಾಪ ವಿನಾಶಕ । ಭೂಮಿಜಾ...... ವರ ॥
ಗೋಪೀಜನ ಹೃತ್ । ಕುಮುದ ಚಂದಿರಾ ।
ಕೋಪಿಸದೆಮ್ಮೊಳು । ಪೊರೆಯೊ ಕೃಪಾಕರ...... ॥ ೧ ॥

* * * * *

ರಾಗ : ಆರಭಿ (ದುರ್ಗಾ) ತಾಳ : ಆದಿತಾಳ

ನಾರದವಂದ್ಯ । ನವಮೋಹನಾಂಗ ।
ನಾರಾಯಣ ಶ್ರೀ । ನರ ಹರಿಯೇ...... ॥ ॥ ಪ ॥
ಆರಾಧಿಪರಘ । ಕಳೆದು ಕಂಗೊಳಿಸುವ ।
ಮಾರ ಜನಕ । ಸುಕುಮಾರ ಶರೀರ ॥ ॥ ಅ.ಪ ॥

ಹೆಣ್ಣು ಹೊನ್ನು । ಮಣ್ಣಿನಾಶೆಗೆ ಈ ತನು ।
ಹಣ್ಣಾಯಿತೋ। ಮುಕ್ಕಣ್ಣ ಪ್ರಿಯ॥
ಮಣ್ಣಾಗುವ ಮುನ್ನ । ಕಣ್ಣ ತೆರದಿಹೆನೋ ।
ಸುಣ್ಣವೇ ಇಲ್ಲದ । ವೀಳ್ಯವಾಯಿತು ಬಾಳು ॥ ೧ ॥

ನೀ ಕರುಣಿಸದೆ । ನಿರಾಕರಿಸಲು ಎನ್ನ ।
ನೂಕಿ ಬಿಡುವರೋ । ನರಕದಲೀ ॥
ಸಾಕುವರ್‍ಯಾರಿಲ್ಲಾ । ವಾಕು ಮನ್ನಿಪರಿಲ್ಲಾ ।
ಜೋಕೆ ಮಾಡುವಧೊರೆ । ನೀನಲ್ಲದೆನಗಿಲ್ಲಾ ॥ ೨ ॥

ಅಂಬುಧಿಶಯನ ಭ । ವಾಂಬುಧಿ ದಾಟಿಸೋ ।
ಅಂಬಿಗ ನೀನೆಂದು । ನಂಬಿಹೆನೋ ॥
ಬಿಂಬನು ನೀ । ಪ್ರತಿಬಿಂಬನು ನಾನಯ್ಯ ।
ಸಂಭ್ರಮವನೆ ತೋರೋ । ಶ್ರೀನಿವಾಸ ಪ್ರಭೋ ॥ ೩ ॥

* * * * *

ರಾಗ : ಸಿಂಧು ಭೈರವಿ ತಾಳ : ಆದಿತಾಳ

ಎಲ್ಲಿಯು ನೀನಿಹೆ । ಫುಲ್ಲನಾಭಾ । ॥ ಪ ॥
ಗುಲ್ಲುಮಾಡದೆ ಎನ್ನ । ಮಾನದಿಂ ಕಾಯೋ..॥ ಅ.ಪ ॥

ನಂಬಿದ ಕಂದನ । ನುಡಿಗೆ ಕಂಭದಿ ಬಂದೇ ।
ಅಂಜಿರೇ ಮುನಿಯಿಂ । ಅಂಬರೀಷನ ಕಾಯ್ದೇ ॥

ತುಂಬಿದಾ ಸಭೆಯೊಳಗೆ । ವನಿತೆಗಕ್ಷಯವಿತ್ತೇ ।
ಜಂಭಾರಿಸುತಗೊಲಿದು, । ಮರಣ ತಪ್ಪಿಸಿದೇ ॥ ೧ ॥

ಪಾಪದಿ ನೀನೇ । ಪುಣ್ಯದಿ ನೀನೇ ।
ಪಾಪಿಯ ಹೃದಯದಿ । ನೆಲಸಿಹ ನೀನೇ ॥
ಪಾಪಿಗೆ ಶಿಕ್ಷೆಯ । ಕೊಡುವನು ನೀನೇ ।
ಪಾಪಿಗಳನು । ಕಾಪಾಡುವ ನೀನೇ...... ॥ ॥ ೨ ॥

ದಾನವಕುಲ । ವಿಧ್ವಂಸ ವಿಚಕ್ಷಣ ।
ಕಾಣಲಾಪೆನೇ । ರೂಪ ವಿಲಕ್ಷಣ ॥
ಪ್ರಾಣನಾಥ ಜಗ । ತ್ರಾಣ ಶುಭೇಕ್ಷಣ ।
ಶ್ರೀನಿವಾಸ, ಭಯ । ಓಡಿಸು ಈ ಕ್ಷಣ ॥ ॥ ೩ ॥

* * * * *

ರಾಗ: ಹಿಂದೋಳ್ (ಮೂಲಕಂಸ್) ತಾಳ : ತ್ರಿಪುಟತಾಳ

ಗೊಲ್ಲನೆಂಬರೇ ಏ ಹರಿಯಾ..... । ಮುರಾರಿಯ ॥ ಪ॥
ಮಲ್ಲ ಮರ್ದನ ಲಕ್ಷ್ಮೀ । ವಲ್ಲಭನೆನ್ನದೇ ॥ ಅ.ಪ ॥

ಶಿಲೆಯ ತಾ ಮೆಟ್ಟುತೇ । ಲಲನೆ ಮಾಡಿದ ನಮ್ಮ ।
ಚೆಲುವ ಮೂರುತಿಯಾ । ನೆಲೆಯ ತಾ ವರಿಯದೇ ॥
ಜಲಜಾಕ್ಷಿಯರಮನ । ಕಲಿಕಿದನೆಂಬರೋ ।
ಬಲಿಯಭಂಗಿಸಿ ತಳಕೆತುಳಿದು ।
ಅವನ ಬಾಗಿಲ ಕಾಯ್ದ ಹರಿಯಾ ॥ ॥ ೧ ॥

ಅರಳಿದ ಮುಖದೊಳು । ಮರುಳು ಮಾಡಿದನೆಂದು ।
ಅರವಿಂದ ವದನೆಯರ । ಸೀರೆ ಸೆಳೆದನೆಂದು ॥
ದುರುಳ ರಕ್ಕಸರ ಸಂ । ಹರಣ ಗೈದುದ ಮರೆತು ।
ವರಳೆಳೆದು ಮರ ಮುರಿದು ತರುವ ।
ಸುರರ ಮಾಡಿದ ನಮ್ಮ ಹರಿಯಾ ॥ ॥ ೨ ॥

ಭಾಸುರ ನಯನನಾ । ದೋಷ ರಹಿತನಾ ।
ವಾಸುಕಿ ಶಯನ ಸ । ರ್ವೇಶಾ ಶ್ರೀ ಕೃಷ್ಣನಾ ॥
ದಾಸಜನರ ಮನೋ । ಭೀಷ್ಟವ ಸಲಿಸುವ ।
ನಾಶವರ್ಜಿತ ಶ್ರೀನಿವಾಸನು ।
ದೋಷದೂರ ಮಹೇಶನೆನ್ನದೆ ॥ ॥ ೩ ॥

* * * * *

ರಾಗ : ಮೋಹನ ತಾಳ : ಝಂಪೆ ತಾಳ

ಪರಮ ಮಂಗಳಧಾಮ। ಸುರನಮಿತ ಮಾಧವಾ ॥ ಪ ॥

ಸರಸಿಜಾಕ್ಷನೆ ನಿನ್ನ । ದರುಶನವನೀಯುತಲಿ ।
ವರ ಕರುಣ ಧಾರೆಯನು । ಸುರಿಸುವುದು ಸತತ ॥ಅ.ಪ॥

ಪತಿತಪಾವನನೆಂದು । ಮತಿವಿಡಿದು ನಂಬಿಹೆನೋ ।
ಕ್ಷಿತಿಯೊಳನ್ಯರ ಕಾಣೆ । ರತಿಪತಿಯ ಜನಕ ॥ ೧ ॥

ಧನ-ಕೀರ್ತಿಯನು ನೀಡೆ । ಅನುರಾಗ ವೃದ್ಧಿಯದು ।
ಮನವ ನಿನ್ನೊಳಗೊಳಿಸಿ । ಅಣುಗರನು ಕಾಯೋ॥ ೨ ॥

ಹಾಲಾಹಲವ ಕುಡಿದ । ಫಾಲನೇತ್ರನ ಸಖನೇ ।
ಬಾಲಕನ ನುಡಿಕೇಳಿ । ಪಾಲಿಸೈ ಪ್ರಭುವೇ ॥ ೩ ॥

ಶರಧಿಯೊಳು ನೆಲಸಿಹಗೆ । ವರಶೇಷ ಶಯನನಿಗೆ ।
ಕರಿರಾಜ ವರದನಿಗೆ । ಶರಣೆಂಬೆ ಸತತ ॥ ೪ ॥

ಘಾಸಿಗೊಳಿಪುದ ಮರೆತು । ಭವದೊಳಗೆ ಮುಳುಗಿಹೆನೊ।
ವಾಸ ವಂದಿತ ಶ್ರೀನಿ । ವಾಸ ದಯಮಾಡೋ ॥ ೫ ॥

* * * * *

## ॥ ಶ್ರೀ ಪರಮಾತ್ಮನಿಗೆ ಪಾದಪೂಜಾ ಪದ ॥

ರಾಗ : ಯಮುನ ಕಲ್ಯಾಣಿ (ಮಧ್ಯಮ ಶೃತಿಯಲ್ಲಿ) ತಾಳ:ತ್ರಿಪುಟತಾಳ

ಪಾದಪೂಜೆಯ ಮಾಡುವೇ ।
ಪರ ಶ್ರೀದ ವಿಠ್ಠಲನಂಘ್ರಿಯ ॥ ॥ ಪ ॥
ಮೋದದಿಂದಲಿ ಮಾಧವನ ।
ಚರಣಾರವಿಂದಕೆ ನಮಿಸುತೇ ॥ ॥ ಅ.ಪ ॥

ಪರಮಪುರುಷನ ವಿಮಲಚರಣವ ।
ಸ್ವರಣ ಪಾತ್ರೆಯೊಳಿರಿಸುತೇ ।
ಎರೆಯುತಲಿ ಪನ್ನೀರ ಸರಸದಿ ।
ವರೆಸುತಲಿ ಕರವಸ್ತ್ರದಿಂ...... ॥ ॥ ೧ ॥

ಬಲಿಯ ಶಿರದಲಿ ರಂಜಿಸಿದ । ಸುರ
ಗಂಗೆ ಜನಕನ ಚರಣವಾ ।
ನಿಲಿಸಿ ಹೃದಯದಿ ಕಮಲ ತುಳಸೀ ।
ದಳಗಳಿಂದಲಿ ಅರ್ಚಿಸೀ ॥ ॥ ೨ ॥

ಸನ್ನುತಾಂಗಗೆ ಸ್ವರ್ಣಪಾತ್ರೆಗಳ್ ।
ವಿಮಲವಸ್ತ್ರಾಭರಣಗಳ್ ।
ಷಣ್ಣರಸ ಸಂಯುಕ್ತ ಫಲ । ಸಂ ।
ಪನ್ನ ಮಹಿಮನಿಗರ್ಪಿಸೀ ॥ ॥ ೩ ॥

ಬಂಧ ಹರ ಗೋವಿಂದ ಮಾಧವ ।
ನೆಂಬ ನಾಮವ ಜಪಿಸುತೇ ।
ತಂದು ಆರತಿ ಬೆಳಗುತಲಿ ಅರ ।
ವಿಂದನಾಭನ ಪೊಗಳುತೇ ॥ ॥ ೪ ॥

ಮೋಕ್ಷಪ್ರದ ಶ್ರೀ ಶ್ರೀನಿವಾಸನ ।
ಅಕ್ಷಿದ್ವಯದಲಿ ಕಾಣುತೇ ।
ದಕ್ಷಿಣಾಪತಿಗೀಗ ಕನಕದ ।
ದಕ್ಷಿಣೆಗಳ್ ನಾವ್ ನೀಡುತೇ ॥ ॥ ೫ ॥

* * * * *

(ಮಧ್ಯಮ ಶೃತಿಯಲ್ಲಿ)

ರಾಗ : ಕುಂತಲವರಾಳಿ                    ತಾಳ : ಆದಿತಾಳ

ರಾಧಾ ಮನೋಹರನೇ । ನಮಿಪೇ ।
ರಾಧೆ ಮನೋಹರನೇ । ನಮಿಪೇ ॥ ॥ ಪ ॥
ಯಾದವ ಕುಲಘನ । ಸದಯ ಯಶೋಧರ ।
ವದಗಿ ರಕ್ಷಿಪುದಯ್ಯಾ । ಬುಧ ಜನವಿನುತಾ...॥ ಅ.ಪ ॥

ರಾಗ : ಪುನ್ನಾಗವರಾಳಿ

ತುಂಬು ರಹಿತ ಗಂ । ಭೀರ ಗುಣಾನ್ವಿತ ।
ಕಂಬುಕಂಧರ ರಮಾ । ಚುಂಬಿತವದನಾ ॥
ಅಂಬರೀಷ ಹೃನ್ । ಮಂದಿರ ಶೋಭಿತ ।
ಬಿಂಬ ಮೂರುತಿ ಜಗ । ದಂಬಾ ಮನೋಹರ ॥

ರಾಗ : ಸಿಂಧು ಭೈರವಿ

ಗೋತ್ರ ವೈರಿ ವಂದಿತ ಮೃದುಚರಣ ।
ವರ ತುಲಸೀ ವನಮಾಲಾಭರಣ ॥

(ನಾಗಸ್ವರ ರೀತಿ)

ಪಾರ್ಥದಾರುಕನೇ........ । ಪರಾರ್ಥದಾಯಕನೇ ।
ಕ್ಷಾತ್ರ ಬೋಧಕನೇ.......ಸು । ಕ್ಷೇತ್ರ ಪಾಲಕನೇ ॥

ರಾಗ : ಪುನ್ನಾಗವರಾಳಿ

ಪ್ರಾರ್ಥಿತ ಗೋಪೀ । ಜನ ಸಂರಕ್ಷಣ ।
ಕರ್ತೃ ಶ್ರೀನಿವಾಸ । ಭವಭಯ ತಾರಣ ॥

* * * * *

## ॥ ಬ್ರಹ್ಮೋತ್ಸವದ ಪದ ॥

ರಾಗ : ಮೋಹನ                    ತಾಳ : ಆದಿತಾಳ

ಬಾರೋ ವೆಂಕಟರಮಣಾ ।
ನೋಡುವೆ ಸುಂದರವದನಾ ।
ಬಾರೋ ಶ್ರೀ ಭೂರಮಣಾ ।
ತೋರಿಸು ನಿನ್ನಯ ಕರುಣಾ ॥ ॥ ಪ ॥

ಸಾರಿದ ಭಕುತರ ತಾಪ ನಿವಾರಿಸಿ ।
ಮೀರಿದ ಹರುಷದಿ, ತೋರುತ ಸಂಭ್ರಮ ॥ ॥ ಅ.ಪ ॥

ಉರುಗನ ಗಿರಿಯಲಿ ಇಂದು ।
ಗಿರಿ ಪುಷ್ಕರಿಣಿಲಿ ಮಿಂದು।
ಪರಿಪರಿ ಜಪ ತಪಗೈದು । ಭೂ ।
ಸುಜನರು ಬಿಜಯಂಗೈದು ॥
ನೆರೆದಿಹರೆಲ್ಲರು ಕಾಂಬುವ ತವಕದಿ ।
**ವರಬ್ರಹ್ಮೋತ್ಸವದಲಿ** । ಈ ರಥಕೇ... ॥ ॥ ೧ ॥

ಮಿತಿಯಿಲ್ಲದ ಆನಂದ । ನೀ ।
ಕೊಡುವಿಯೋ ನಂದನ ಕಂದ ।
ಅತಿಶಯ ಮಹಿಮೆಗಳಿಂದ । ನೀ ।
ಮೆರೆವೆಯೋ ಜಗದಿ, ಗೋವಿಂದ ॥
ಖತಿಗೊಳಪಡಿಸದೆ ಸುಕೃತರ ಮನೋರಥ ।
ಹಿತದಿ ಸಲಿಸೆ ಸದ್ । **ವಿಜಯದಶಮಿಯಲಿ** ॥ ೨ ॥

ನೃತ್ಯ ವಾದ್ಯ ಗೀತಾ ವೃತ್ತದಿ । ಮೆರೆಯೆ ತಿರುಮಲೇಶ ।
ಸ್ತುತ್ಯನಾಗಿ ರಥದೊಳ್ । ಪರಿಪರಿ ಹಾರಾಭರಣದಲಿ ॥
ಎತ್ತಿದ ಧ್ವನಿಯಲಿ । ಭಕ್ತರು ಪೊಗಳಲು ।
ಕುತ್ತು ಕಳೆದು ಸುಖವಿತ್ತು । ಪೊರೆವ ಧೊರೆ ॥ ॥ ೩ ॥

ಹತ್ತವತಾರದಲೀ ದೈತ್ಯರ । ಶಕ್ತಿ ಮುರಿದು ಮೆರೆದೇ ।
ಮುತ್ತಿದ ಅಜ್ಞಾನ ತೊಲಗಿಸೆ । ಜಗದಿ ವ್ಯಾಸನಾದೀ ॥
ಬಿತ್ತರಿಸಲು ನೀ । ಗಿರಿಯಲಿ ವೈಭವ ।
ಉತ್ತಮರಿಗೆ **ವೈಕುಂಠ ಸಪ್ತಗಿರಿ** ॥ ॥ ೪ ॥

ಕಂಡು ಧನ್ಯನಾದೇ ಗಿರಿಯಲಿ । ಹಿಂಡು ಪಾಪವ ಕಳೆದೇ।
ತಂಡ ತಂಡದಿ ಬರುವ...... ಭಕುತರ ।
ನೋಡಿ, ಮಣಿದು ಕುಣಿದೇ ॥
ಚಂಡಪರಾಕ್ರಮಿ ಶ್ರೀನಿವಾಸ ನಿನ್ನ ।
ಕಂಡು, ಪ್ರಸಾದವ ಕೊಂಡು ಮರಳುವೆನು ॥ ॥ ೫ ॥

* * * * *

ರಾಗ : (ಬೃಂದಾವನ-ಸಾರಂಗ) ತಾಳ:ರೂಪಕ ತಾಳ (ವಿಳಂಬ)

ಇಂದಿನ ದಿನ ಸುದಿನವಾಯಿತು ॥ ॥ ಪ ॥
ಸುಂದರ ಶ್ರೀರಾಮಚಂದ್ರ ।
ನಂದನರೊಳು ಕೂಡಿ-ನಲಿವಾ ॥ ॥ ಅ.ಪ ॥

ತಂದೆ, ಮುನಿಗೆ ಕೊಡಲುವಿಪಿನ ।
ಪೊಂದಿ ಅನುಜನೊಡನೆ, ಖಳರ ।
ಕೊಂದು, ಮುನಿಯ ಸವನ ।
ಸುಮನ । ದಿಂದ ಪೂರ್ತಿಸೀ ॥
ನೊಂದ ಸುದತಿ ಶಾಪ ಕಳೆದು ।
ಇಂದುಧರನ ಧನುವ ಮುರಿದು ।
ಮಂದಗಮನೆ ಸುಗುಣೆ ಜನಕ ।
ನಂದನೆಯಳವರಿಸಿ ಮೆರೆದಾ ॥ ॥ ೧ ॥

ಪಿರಿದು ಜನನಿ ಭಾಷೆ ಸಲಿಸೆ!
ಭರತಗಾಗಿ ರಾಜ್ಯವಿತ್ತು ।

ಸರಿದು ವನಕೆ ಕನಕ ಮೃಗದ । ವ್ಯಾಜ ನಿರ್ಮಿಸೀ ॥
ಧರಣಿಸುತೆಯ ಸೊಯ್ದು ಖಳನ ।
ಶಿರವ ತರಿದು, ವಹ್ನಿ ಮುಖದಿ ।
ಪರಮ ಶುದ್ಧೆ ಸೀತೆಯೆಂದು ।
ಜಗಕೆ ತೋರಿ, ಹರುಷವಿತ್ತಾ ॥ ॥ ೨ ॥

ಭಕ್ತಿಗೊಲಿದು ವಿಭೀಷಣಗೆ ।
ಇತ್ತು ರಾಜ್ಯ, ಹನುಮನಿಂದ ।
ಭಕ್ತಿಭರಿತ ಭರತನಸುವ । ಉಳಿಸಿ ಕೃಪೆಯಲೀ ॥
ಭೃತ್ಯವರ್ಗದಾಸೆ ಸಲಿಸೆ ।
ಧಾತ್ರಿಯೋಳ್ ಅಭಿಷಿಕ್ತನಾಗಿ ।
ಸತ್ಯ ಸುಖದ ಶ್ರೀನಿವಾಸ ।
ನಿತ್ಯ ಭುವಿಗೆ ಮಂಗಳವೀಯಲು ॥ ॥ ೩ ॥

* * * * *

ರಾಗ : ವಿಜಯನಾಗರೀ (ಸರಸ್ವತಿ) ತಾಳ : ಆದಿ ತಾಳ

ಕೊಳಲೂದೋ ಜಗನ್ಮೋಹನಾ...... ।
ಕೊಳಲೂದೋ ಜಗನ್ಮೋಹನಾ ।
ತೊಳಲೀ ಬಳಲೀ ಬಂದ । ಮತಿಗೇ-ಮಂಗಳವೀವ॥ಪ॥
ನಂದ ಗೋಕುಲದಲ್ಲಿ । ಚೆಲ್ವ ಚಂದ್ರಿಕೆಯಲ್ಲಿ ।
ಸುಂದರ ಮುಖದಲ್ಲಿ । ಮಂದ...... ಹಾಸವ. ಬೀರಿ
॥ ಅ.ಪ ॥

ಮಡುವ ಧುಮುಕಿ ಕಾ । ಳಿಂಗನ ಫಣೆಯೊಳು ।
ಬಿಡದೆ ತಕಿಟ ತಕ । ಧಿಮಿಕೆಂದು ಕುಣಿಯಲು ॥
ತಡೆಯದೆ ಮಿಡುಕಿದ । ಫಣಿ ಸತಿಯರ ಮೊರೆಗೆ ।
ಕಡು ಕೃಪೆ ತೋರಿದ। ಚೆಲುವಾ-ಮೂರುತಿ ಕೃಷ್ಣ॥ ೧ ॥

ಕಲರವ ನಿಲಿಸಿರೆ । ಮೃಗಪಕ್ಷಿ ಸಂಕುಲ ।
ನೆಲದಿ ಗೋವ್ಗಳ ಹಿಂಡು । ಮೇವುದ ಬಿಟ್ಟಿರೇ ॥
ಕೊಳಲಿನ ನಾದಕೆ । ಜಗ-ಮೈ ಮರೆತಿರೆ ।
ತೊಲಗಿಸಿ ಹೃತ್ತಾಪ । ಮುದವಾ....ಈ ಯುವ ನಿನ್ನ
॥ ೨ ॥

ಕಿಂಕಿಣಿ, ಕಿಣಿರೆನ್ನೆ । ಗೋಪೇರ ಕಂಕಣ ।
ಝುಣ್ ಝುಣ ಝುಣರೆನ್ನೆ । ಕಾಲಿನ ಗೆಜ್ಜೆ ॥
ಥಣ್ ಥಣ ಥಣರೆನ್ನೆ । ಝಾಂಗಟೆ ವಾದ್ಯಗಳ್ ।
ಝುಣಕು ಝುಣಕು ಎಂಬೋ । ಪಾದಲಯವ ತೋರಿ
॥ ೩ ॥

ವಾಮಸ್ಕಂದದಲಿ । ವಾಮಕಪೋಲವು ।
ವಾಮಕರಪುಟದಿ । ರಂಜಿಪ ವೇಣು ॥
ಸೌಮ್ಯದಿ ಸಾಗಿರೆ । ಯಮುನೆ ತರಂಗಿಣೀ ।
ಕಾಮಜನಕ ಶೃಂಗಾರ । ರೂಪನೆ ರಂಗ ॥ ೪ ॥

ಸುರರು ಅಂಬರದಿ । ಪಾಡುತ ಕುಣಿಯಲು ।
ನೆರೆದ ಗೋಪರ ಹಿಂಡು । ಮ್ಯಾಳದೊಳೊಪ್ಪಲು ॥
ಹರ ಬೊಮ್ಮಾದಿಗಳ್ । ತಾಳ ವಾದ್ಯವ ನುಡಿಸೆ ।
ಪರಬೊಮ್ಮ ಶ್ರೀನಿವಾಸ । ವಿವಿಧ-ರಾಗದಿ ಚೆಲ್ವ॥ ೫ ॥

* * * * *

ರಾಗ : ಆರಭಿ ತಾಳ : ಆದಿತಾಳ

ಪಾಪವಿದೂರನ ಪಾವನ ಕರಕೆ ।
ಆಪೋಶನ ನೀಡಿದಳು । ಶ್ರೀ ಲಕುಮಿ ॥ ॥ ಪ ॥
ಗೋಪತಿ ಕೃಷ್ಣ ಸು । ಪೀಠದಿ ಕುಳ್ಳಿರೆ ।
ಶ್ರೀಸತಿ ಸಂಭ್ರಮ । ದಿಂದ ಗೋಘೃತದಿ ॥ ॥ ಅ.ಪ ॥

ಅಂದು ಶಿಲೆಯ ಮುನಿಸತಿಯಳ ಮಾಡಿದ ।
ಧೀರ ರಾಮನೆಂದೂ...... ॥
ಇಂದುಧರನ ಧನುಭಂಗಗೈದ । ಸೀತಾಪತಿ ಇವನೆಂದೂ ।
ಕಂದರ ದಶಕನ । ಕೊಂದು ನಿಜಸತಿಯ।
ತಂದವನಿವನೆಂದೂ ।
ಮಂದಗಮನೆ ತಾ । ಚೆಂದದಿ ತಿಳಿದು। ಸು ।
ರೇಂದ್ರವಂದ್ಯಗೆ । ಕ್ಷೀರವ ನೆರೆಯುತ ॥ ॥ ೧ ॥

ತ್ರಿಗುಣಾತೀತನ ಸುಗುಣಗಡಣಗಳ ।
ಮನದಲಿ ಸ್ಮರಿಸುತಲೀ ।
ಬಗೆಗಾಣದ । ಅಪ್ರತಿಮಹಿಮನಗುಣ ।
ಅರಿವಿಂ ಪಾಡುತಲೀ ॥
ಜಗದಾಧಾರನು । ಸುರರಿಂದೊಪ್ಪಲು ।
ನೋಡುತ ಹಿಗ್ಗುತಲೀ ।
ನಗೆಮೊಗದಿಂದಲಿ । ಮಿಗೆ ಚೆಲುನೋಟದಿ ।
ಸೊಗಯಿಪ ಕಂಕಣ । ದಕ್ಷಿಣ ಕರದಿಂ ॥ ॥ ೨ ॥

ಪ್ರಾರ್ಥಿಪ ಸುರರಿಗೆ । ಅಮೃತವನುಣಿಸಿದ ।
ಶ್ರೀಪತಿ ಇವನೆಂದೂ ॥
ಪಾರ್ಥಿವರೆಲ್ಲರ ಸೊಕ್ಕಡಗಿಸಿದ। ಪಾರ್ಥಸಾರಥಿಯೆಂದೂ।
ಆರ್ತರಾಗಿ ನೀನೇ ಗತಿ ಎಂಬರ ।
ಕಾಯ್ವ ಸ್ವಾಮಿಯೆಂದೂ ।
ಮರ್ತ್ಯಲೋಕದೊಳು । ನಿತ್ಯಸೇವೆಯಗೊಂಬ ।
ಸತ್ಯುರಗಾದ್ರಿಯ । ಶ್ರೀನಿವಾಸನೆಂದು ॥ ॥ ೩ ॥

* * * * *

## ॥ ನಿಂದಾಸ್ತುತಿ-ಪದ ॥

ರಾಗ : ಭೈರವಿ     ತಾಳ : ಝುಂಪೆ ತಾಳ

ಮಾನ ರಹಿತನೆ ದೇವ । ಸುಜ್ಞಾನ ಮೂರುತಿಯೇ ।
ಮೌನದಲಿ ಏನಿನಿತು । ಪರಿಕಿಸುವಿಯೋ ॥ ಪ ॥

ನೆನೆನೆನೆದು ಪಾಡುವರ । ಭಾಗ್ಯಗಳ ಕಸುಕೊಂಬ ।
ಕಾರುಣ್ಯನಿಧಿ ಎನ್ನ । ಕೈ ಪಿಡಿದು ನೋಡೋ.... ॥ಅ.ಪ॥

ಜ್ವರ ಬಂದು ತನುವಿನೊಳು । ಪರಿತಾಪ ಪಡುತಿರ್ಪ ।
ತರಳನಂ ಈಕ್ಷಿಸದೇ । ಮರೆವರೇನೋ ॥
ಕರಿವರದ ನೀನೆಂದು । ಅರಿತರಿತು ಜ್ಞಾನಿಗಳು ।
ಶಿರಬಾಗಿ ಬೇಡುವರೋ। ಕೊರಳ ಹೊಯ್ಕನನು ॥ ೧ ॥

ಪ್ರಾಣ ರಕ್ಷಕನೆಂದು । ಧ್ಯಾನಗೈವರೋ ನಿನ್ನ ।
ಹೀನ ಕೃತ್ಯವ ಮರೆತ । ಮುನಿವರ್ಯರು ॥
ದಾನವೀಯುತೆ ಕರ್ಣ । ಪ್ರಾಣ ನಿನಗರ್ಪಿಸಲು ।
ಮೌನದಿಂ ಕೊಲ್ಲಿಸಿದೆ । ದೀನವತ್ಸಲನೆನಿಸೀ ॥ ೨ ॥

ಮಂದರೋದ್ಧರ ನಿನಗೆ । ಸಹ್ಯಾದ್ರಿ ಕಾನನದೋಳ್ ।
ಅಂದು ತನು ನೀಡಿದುದ । ಇಂದು ಮರೆತ್ಯಾ ॥
ಮಂದಮತಿಯಾದೆನ್ನೈ । ಸೃತಿ ಬಂಧದೊಳು ಸಿಲುಕಿ ।
ತಂದೆ ರಕ್ಷಿಸಬೇಕು । ವಾಕು ಮನ್ನಿಸುತಾ.... ॥ ೩ ॥

ಕಾಮಿನಿಯರೊಂದಾಗಿ । ನೇಮದಿಂದಲಿ ವ್ರತದಿ ।
ಕಾಮಿತಾರ್ಥವನೀವನೆಂದು । ಅರ್ಚಿಸಲೂ ॥
ಕಾಮವರ್ಜಿತನೆನಿಸಿ । ಗೋಪೀರವ್ರತಕೆಡಿಸೀ ।
ಕಾಮಪೂರಣನೆನಿಸಿ । ಮೆರೆದಂಥ ಹರಿಯೇ.... ॥ ೪ ॥

ವಾಸುಕೀಶನೆ ನಿನ್ನೊಳ್ । ಆಶೆಯೆಂಬುದನಿರಿಸಿ ।
ಮೋಸ ಹೋಗಿಹೆನೇನೋ । ಭೇಷಜರ ಮರೆತು ॥
ದೋಷದೂರನೆ ಎನ್ನ । ಕ್ಲೇಶ ಪಾಶದೊಳಿರಿಸಿ ।
ಚೋಷ್ಯ ಭೋಜ್ಯಾದಿಗಳ । ಕೈಗೊಂಬೆ ಎಂತೋ....॥೫॥

ಅಪಕೀರ್ತಿ ನಿನಗುಂಟು । ಕೃಪಣ ವತ್ಸಲನೆಂದು ।
ಕೃಪಣನಲಿ ಕೃಪೆಮಾಡೋ । ಉಪಕಾರಿಯೇ ॥
ಅಪರಾಧಿ ನಾನೆಂದು । ಬಿಡಬೇಡವೋ ಕೈಯ್ಯ ।
ಕುಪಿತನಾಗದೆ ಒನ್ನೊಳ್ । ಅಪರೂಪಚರಿತಾ...॥ ೬ ॥

ಕುಬುಜೆಯಳ ಘನಭೊಂಕು । ಕಾಣಲಿಲ್ಲವೋ ನಿನಗೆ ।
ಶಬರಿ ಎಂಜಲ ಫಲವು । ಸೊಗಸೆನಿಸಿತೋ ॥
ಅಬುಜಾಕ್ಷ ನಿನ್ನವರ । ಛಿದ್ರವೆಣಿಸದೆ ಕಾಯ್ವೇ ।
ಅಬುಧ ನಾನಾದರೂ । ವಿಭು ನಿನ್ನ ನಂಬಿಹೆನೋ...॥೭॥

ದನುಜಸುತ ನಿನಗಂದು । ಏನನಿತ್ತನೋ ದೇವ ।
ಮಾನನಿಧಿ ದ್ರೌಪದಿಯು । ಏನಿತ್ತಳೋ ॥
ಹೀನನುಡಿ ಮಳೆಗರೆದ । ಶಿಶುಪಾಲನೇನಿತ್ತ ।
ಹೀನಜಾತನ ಗೃಹದಿ । ಪಾಲುಂಡ ಶುದ್ಧ...... ॥ ೮ ॥

ಸಾಕಾಗಿ ನಿನಗಂದು । ಮೂಕನಂದದಿ ಕುಳಿತೆ ।
ಲೋಕೇಶ ನೀ ಎನ್ನ । ಕಾಯಬೇಕೋ ॥
ಯಾಕೆ ನಿಷ್ಠುರವಯ್ಯ । ಶ್ರೀಕಾಂತ ಭಕ್ತರೊಳು ।
ಬೇಕಾಗಿ ಕಾಡುವೆಯಾ । ಶ್ರೀಕಮಲನಾಭಾ..... ॥ ೯ ॥

ತಾರತಮ್ಯ ಪಂಚ । ಭೇದ ಶಾಸ್ತ್ರವನರಿಯೇ ।
ಸಾರತತ್ವದ ಪರಮ । ಭಾಗವತವರಿಯೇ ॥
ಹೀರದಂದದಿ ಮೆರೆವ । ಗೀತಾರ್ಥವರಿಯೆನೋ ।
ಪಾರುಗಾಣಿಸೊ ನಿನ್ನ । ಚರಣ ನಂಬಿಹೆನೋ ॥ ೧೦ ॥

ದಾಸ ನಾನೆಂದೆನಿಸಿ । ದೇಶ ದೇಶವ ತಿರುಗಿ ।
ಶ್ರೀಶನೇ ಗತಿಯೆಂದು। ನುತಿಸಿ ಪಾಡೇ ॥
ವಾಸವಾರ್ಚಿತ ಶ್ರೀನಿ । ವಾಸವರ್‍ಯನೆ ಎನ್ನ ।
ದೋಷ ಮೂಲವ ಕಳೆದು। ನೀ ಮೋಕ್ಷವೀಯೋ॥೧೧॥

* * * * *

ರಾಗ : ಕಾಪಿ ತಾಳ : ಆದಿತಾಳ

ಬೈತಲೇ ಇರಬೇಕು । ನರರಿಗೇ। ಬೈತಲೇ ಇರಬೇಕು॥ಪ॥
ಪಾರ್ಥಸಖನ ಸಂ । ಪ್ರಾಪ್ತಿಯ ನೀಡುವ ।
ವಾತಜಕೃತ ಶಾ । ಸ್ತ್ರಾರ್ಥವ ಬೋಧಿಸೇ... ॥ ಅ.ಪ ॥

ಪತಿ ಪೂಜಕ ಸತ್ । ಪತಿ ಸೇವಕರಿಗೆ ।
ಅತಿಮೋಹದ । ಬೈತಲೇ ಬೇಕು ॥
ಹಿತಮಾಗಿರೆ, ಆ । ಸತಿಯರ ವಂಚಿಸಿ ।
ನುತಿಸುತ ಪತಿತಾಂಗನೆಯರ ಸೇರಲು ॥ ॥ ೧ ॥

ದುರುಳತ್ವದಿ ಸನ್ । ಮತಿಗಳ ಜರಿದೂ ।
ಉರುಗರ್ವದಿ ದುರ್ । ವಿಷಯದೋಳ್ ಮಿಂದು ॥
ಪರಮ ಪುರುಷನಾ । ಮರೆಯುತಲಿಂದು ।
ಪರದೇಶದ ಕೃತಿ । ಬಯಸುವ ಮನುಜಗೆ ॥ ॥ ೨ ॥

ಕ್ರೋಧ ಲೋಭಮದ । ಮತ್ಸರವೆಂತೆಂಬ ।
ಕಾಡುವ ದೈತ್ಯರ । ಮುರಿದುವಟ್ಟೀ ॥
ಮಧುಸೂದನ ಶ್ರೀನಿ । ವಾಸನ ಚರಣದೋಳ್ ।
ಸದಮಲ ಭಕುತಿಯ । ನಿಲಿಸಲು, ಸುಜನರು ॥॥ ೩ ॥

* * * * *

## ॥ ಆರತಿ ಪದ ॥

ರಾಗ : ತಿಲಂಗ್ ತಾಳ : ಏಕತಾಳ

ಆರತಿ ಬೆಳಗುವೆವು। ಶಿರಿವರನಿಗಾರುತಿ ಬೆಳಗುವೆವು ।।ಪ।।

ಮಾರಜನಕ ಮುರಳೀಧರ ಮೋಹನ ।
ಸೂರಿಜನರ ಹೃದಯಾಂಬರ ಚಂದಿರ ।
ಗಾರುತಿ ಬೆಳಗುವೆವು ॥ ॥ ೧ ॥

ಗೌತಮ ಸತಿಘನ । ಶಾಪ ವಿಮೋಚನ ।
ವಾತಜನುತ ರಘುನಾಥಗೆ ಈ ।
ಕದಲಾರತಿ ಬೆಳಗುವೆವು ॥ ॥ ೨ ॥

ಭಂಗರಹಿತ ಕಾಳಿಂಗ ವಿಮರ್ದನ ।
ಮಂಗಳಾಂಗ ಶುಭ ಮಂಗಳ ।
ಮಣಿಮಯದಾರುತಿ ಬೆಳಗುವೆವು ॥ ॥ ೩ ॥

ಸುಂದರಮಣಿಮಯ । ಪೀಠದೊಳೊಪ್ಪುವ ।
ನಂದಕುಮಾರಗೆ । ಮಂಗಳಮೆನ್ನುತ ।
ಆರತಿ ಬೆಳಗುವೆವು ॥ ॥ ೪ ॥

ವಾಸವಾದಿ ಸಕಲಾಮರ ಪೂಜಿತ ।
ವಾಸುದೇವ ಶ್ರೀನಿವಾಸನೆ ।
ಪೊರೆಯೆಂದಾರತಿ ಬೆಳಗುವೆವು ॥ ॥ ೫ ॥

* * * * *

## ॥ ಮಂಗಳ ಪದ ॥

ರಾಗ : ಸುರಟಿ ತಾಳ : ಅಟತಾಳ

ಜಯಮಂಗಳಂ ನಿತ್ಯ । ಶುಭ ಮಂಗಳಂ ।
ಜಯ ಮಂಗಳಂ ನಿತ್ಯ । ಶುಭ ಮಂಗಳಂ ॥
ಜಯ ಮಂಗಳಂ । ನಿತ್ಯ ಶುಭಮಂಗಳಂ॥ ॥ ಪ ॥

ಮಂಗಳವು ಶ್ರೀಪತಿಗೆ । ಮಂಗಳವು ಶ್ರೀ ಸತಿಗೆ ।
ಮಂಗಳವು ವಾಗ್ದೇವಿ । ಪತಿಬ್ರಹ್ಮಗೇ ।
ಮಂಗಳವು ಭಾರತೀ । ಹೃದಯೇಶಗೇ ।
ಮಂಗಳವು ಭಾರತೀ । ಹೃದಯೇಶಗೆ ॥ ॥ ೧ ॥

ಮಂಗಳವು ಸೌಪರ್ಣಿ । ವಾರುಣೀ ಪತಿಗಳಿಗೆ ।
ಮಂಗಳವು ಪಾರ್ವತೀ । ಪತಿ ಈಶಗೇ ।
ಮಂಗಳವು ಸುರನಾಥ । ಗಣನಾಥಗೆ ।
ಮಂಗಳವು ಸುರನಾಥ । ಗಣನಾಥಗೆ ॥ ॥ ೨ ॥

ಮಂಗಳವು ಸುರಗಣಕೆ । ಮಂಗಳವು ಋಷಿ ಕುಲಕೆ ।
ಮಂಗಳವು ಸನಕಾದಿ । ಯತಿ ವೃಂದಕೇ ।
ಮಂಗಳವು ಶ್ರೀನಿವಾಸ । ದಾಸ ಜನಕೇ ।
ಮಂಗಳವು ಶ್ರೀನಿವಾಸ । ದಾಸ ಜನಕೇ ॥ ॥ ೩ ॥

* * * * *

## ॥ ದೇವರ ನಾಮ ॥

ರಾಗ : (ನಾಟ) ತಾಳ : ಝುಂಪೆತಾಳ

ಜಯತು-ಜಯತು ॥ ಜಯತು-ಜಯತು ।
ಜಯತು-ಜಯತು.................... ॥ ॥ ಪ ॥

ಜಯತು ದಶರಥರಾಮ । ಕೋದಂಡರಾಮ... ।
ಜಯತು ಪಾವನ ನಾಮ । ಜಯತು ಗುಣಧಾಮ ॥
ಜಯತು ಮಾರುತಿ ಪ್ರೇಮ । ವೈಕುಂಠಧಾಮಾ ।
ಜಯತು ಶ್ರೀ ರಘುವಂಶ। ವಾರಿನಿಧಿಸೋಮಾ॥ ಅ.ಪ ॥

ನರನಾಗಿ ಕೌಸಲ್ಯೆಯಲ್ಲಿ । ನೀಜನಿಸೀ ।
ಪರ ಮುನಿಯ ಅನುಸರಿಸಿ । ಸವನ ಪೂರೈಸೀ ॥
ಕರುಣೆಯಲಿ ಶಿಲೆ ಮೆಟ್ಟಿ । ಮುನಿಸತಿಯ ಗೈಸೀ ।
ಮುರಿದ್ಯೋ ನೀ। ಹರಧನುವ। ಸೀತೆಮನ ವಲಿಸೀ॥೧ ॥

ಜನಕಂಗೆ ವಲಿದು । ಸೀತೆಯ ಲಗ್ನವಾದೀ ।
ಜನಕನಾಜ್ಞಧಿಸೀತೆಯೊಡ । ವಿಪಿನಕ್ಹೋದೀ ॥
ಜನಕಜೆಯ ಕದ್ದವನ । ಪುರಕ್ಹೋಗಿ ಕೊಂದೀ ।
ಜನಕಜೆಯ ಒಡಗೂಡಿ । ಪಟ್ಟವನೆ ಆಳ್ದೀ ॥ ೨ ॥

ಪತಿತಪಾವನ ಜಗಕೆ । ಜಾನಕೀರಾಮ.... ।
ನುತಿಸಿ ಪಾಡುವೆ ನಿರುತ । ಶ್ರೀರಂಗಧಾಮಾ.... ॥
ಕ್ಷಿತಿಗೆ ಮಂಗಳ ಶ್ರೀನಿವಾಸ । ಶುಭನಾಮಾ।
ಸತಿ ಸೀತೆಯೊಡಗೂಡಿ । ಶುಭನೀಡು ರಾಮಾ ॥ ೩ ॥

* * * * *

## ॥ ವೇದವ್ಯಾಸರ ಸ್ತುತಿ ಪದ ॥

ರಾಗ : ಕೇತಾರ        ತಾಳ : ಆದಿತಾಳ (ತಿಸ್ರನಡೆ)

ಬಾಗಿ ಭಜಿಸುವೆ ಬಾದರಾಯಣನೇ॥ ಆನಂದಮುನಿಪನೆ ।
ಬಾಗಿ ಭಜಿಸುವೆ । ಬಾದರಾಯಣನೇ....... ॥ ॥ ಪ ॥

ಸಂದ ಭವದೊಳು । ನೊಂದು ತವ ಪದ ।
ಪೊಂದಿ ಸುಖಿಸಲು । ಬಂದ ಜೀವರ ।

ವೃಂದ ವೃಜಿನವ । ಛಿಂದಿಗೈಸುವ ।
ಇಂದಿರಾಪತಿ । ಮಂದರೋದ್ಧರ ॥ ೧ ॥

ಹಿಂದೆ, ದ್ವಾಪರದಲ್ಲಿ, ಗೌತುಮ ।
ನಿಂದಶಾಪವ, ಪೊಂದಿ, ಭುವಿಸುರ ।
ವೃಂದವು, ಕಂಗೆಡೆ । ಅಂಬುಜೋದ್ಭವ ಬರೆ ।
ಅಂಜನದಿರೆನ್ನುತ । ಭುವಿಯೋಳು ಜನಿಸಿದಿ ॥ ೨ ॥

ಖ್ಯಾತಮೌನಿಯು-ಸೂತ ಕನ್ಯೆಯ, ।
ನೋಂತು ತವಕದಿ । ಕೂಡಿ ರಮಿಸಲು ॥
ಗಾತ್ರವ ಪ್ರಕಟಿಸಿ, ಅ । ಪ್ರಾಕೃತನೆ ಮುನಿ ।
ಪಾತ್ರವ ವಹಿಸಿ, ವಿ । ಚಿತ್ರವ ಮೆರೆಸಿದಿ ॥ ೩ ॥

ವೇದಶಾಸ್ತ್ರ । ಪುರಾಣ ಸೂತ್ರದಿ ।
ಸಾಧಿಸೀ ಭುವಿ । ತತ್ವನಿರ್ಣಯ ।
ಹಾದೀಯ ತೋರೀಸಿ । ಸಾಧು ಸಜ್ಜನರಿಗೆ ।
ಮೇದಿನೀ ಪತಿ- । ಶ್ರೀನಿವಾಸನೇ ॥ ॥ ೪ ॥

* * * * *

## ॥ ಶಾಲಿಗ್ರಾಮ ಪೂಜಾ ಬಗ್ಗೆ ॥

ರಾಗ : ಪೂರ್ವಿಕಲ್ಯಾಣಿ ತಾಳ : ಆದಿತಾಳ (ತಿಸ್ರನಡೆ)

(**"ನಗೆಯು ಬರುತಿದೆ"** ಎಂಬಂತೆ)

ಪೂಜೆಮಾಡಿ ಫಲವಗಳಿಸಿರೋ । ನೀವೆಲ್ಲ ಇಂದು ।
ಪೂಜೆಮಾಡಿ ಹರಿಯ ವಲಿಸಿರೋ...... ॥ ಪ ॥

ಪೂಜೆ ಮಾಡಿ ಮಾಡಿ ವ್ಯರ್ಥ।
ಕಾಲ-ಜನ್ಮಕಳೆಯಬ್ಯಾಡಿ।
ಸ್ವೈಜ ಸನ್ನಿಧಾನ ಲೋಪ ।
ಪೂಜೆಗೊಂಬ ಪ್ರತಿಮೆಗಳಲಿ ॥ ಅ.ಪ ॥

ಕಾಲಬಲದಿ ಕಲಿಯು ಹೆಚ್ಚೆ ।
ಸಾಲಿಗ್ರಾಮ ಒಂದೇ ಗತಿಯು ।
ಸಾಲಿಗ್ರಾಮದಲ್ಲಿ ನಿರುತ ।
ಹರಿಯ ಸನ್ನಿಧಾನ ಕೆಡದು ॥ ॥ ೧ ॥

ಹಿಂದೆ ಗಂಡಕೀ ಎಂಬ ।
**ವೇಶ್ಯೆ ಹರಿಯ** ಭಕುತಿ ಮಾಡಿ ।
ಇಂದಿರಾಧವನ ವಲಿಸಿ ।
ಇಂತುವರವಪಡೆದಳಾಕೆ ॥ ॥ ೨ ॥

ಮೂರು ರೂಪಧರಿಸಿ ಎನ್ನ ।
ಗರ್ಭದಲ್ಲಿ ಜನಿಸಬೇಕು ।
ಮೆರೆಸೆ ಕೀರ್ತಿ ಸುಜನರಲ್ಲಿ ।
ಪೂಜೆ ಕೈಗೊಳ್ಳಬೇಕು ॥ ॥ ೩ ॥

ಇಂತು ವರವ ಕೇಳೆ ಸುದತಿ ।
ಕಂತು ಜನಕ ವರವನಿತ್ತು ।
ಇಂತುಪೇಳ್ದ ಧರೆಯ ಜನಕೆ ।
ಶಾಂತಮನದಿ ಕೇಳಿರೆಲ್ಲಾ ॥ ॥ ೪ ॥

ನದಿಯಮಾಡಿ **ಗಂಡಕೀಯ** ।
ಉದರದಲ್ಲಿ ಜನಿಸಿ ಬರುವೆ ।
ಮುದದಿ ಶಿಲೆಯ ರೂಪಧರಿಸಿ ।
ಪೂಜೆಗೊಂಡು ಫಲನೀವೆ ॥ ॥ ೫ ॥

ಎಲ್ಲದಕ್ಕಿಂತ ಮಿಗಿಲು ।
ಸಾಲಿಗ್ರಾಮ ಪೂಜೆ-ತೀರ್ಥ ।

ಇಲ್ಲವೆನ್ನೆ ಸಾಲಿಗ್ರಾಮ ।
ಎಲ್ಲ ಪೂಜೆ ದುಡಿಮೆ ವ್ಯರ್ಥ ॥ ॥ ೬ ॥

ಹರಿಯ ನುಡಿಯನರಿತು ಜನರು ।
ಹರಿಯ ಶಿಲೆಯ ಪೂಜೆಮಾಡಿ ।
ಪರಮ ಪದವಿ ಭಾಗ್ಯ ಪಡೆದು ।
ಶ್ರೀನಿವಾಸನ ಒಲಿಸುತಿಹರು ॥ ॥ ೭ ॥

* * * * *

ರಾಗ : ಬಾಗೇಶ್ವರಿ ತಾಳ : ಝಂಪೆತಾಳ

ಹ್ಯಾಂಗಿನ್ನು ದೊರಕುವುದೋ ।
ಹರಿ ನಿನ್ನ ಕರುಣೆ ॥ ॥ ಪ ॥

ಹ್ಯಾಂಗ್ಯಾಂಗೋ ನಾನಿದ್ದು ।
ಈಗ ಭಜಿಸುವೆನಲ್ಲೋ.... ॥ ॥ ಅ.ಪ ॥

ಮಡದಿ ಮಕ್ಕಳಸೇವೆ । ಒಂದಿನವೂ ಬಿಡಲಿಲ್ಲಾ ।
ಹಡೆದವರ ಸೇವೆಗೆ । ಬಿಡುವೇ ಇಲ್ಲಾ ॥
ಒಡನಾಡಿ ಕುಹಕರಿಗೆ । ಉಣಬಡಿಸಿ ಹಿಗ್ಗಿದೆನೋ ।
ಒಡ ಹುಟ್ಟಿದವರೊಡನೆ । ಹಗೆತನವ ಸಾಧಿಸಿದೇ॥ ೧ ॥

ಶುದ್ಧ ಧರ್ಮದಲಿಹರ । ಸೈರಿಸದೆ ದೂರಾದೆ ।
ಕದ್ದು-ಪುಸಿಯಾಡಿ, ನಾ । ಹೊಟ್ಟೆ ಹೊರೆದೇ ॥
ವದ್ದು-ಕೆಡಹುವರೆನ್ನ । ಯಮನವರು ನರಕದಲಿ ।
ಉದ್ಧಾರ ಮಾಡೆನ್ನೆ । ಬಾಯಿಲ್ಲವಯ್ಯಾ...... ॥ ೨ ॥

ಮರೆ ಮೋಸ ಕಳ್ಳತನ । ವಂಚನೆ ವ್ಯಭಿಚಾರ ।
ಉರುಗರ್ವ ಪರನಿಂದೆ । ದುಷ್ಟ ಬುದ್ಧೀ ॥
ಬರಿದುಡಿತ-ಋಣಭರಿತ । ಜೀವಿತನು ನಾನಾಗಿ ।
ಪರಿಹಾಸಕೀಡಾಗಿ । ಹಾಳಾದೆನಲ್ಲೋ...... ॥ ೩ ॥

ಮಾನಿನಿಯರೊಡನಾಟ । ಮಾನಹೀನರಕೂಟ ।
ಮನೆ ಹಾಳು ತನದಾಟ । ಎಂಜಲೂಟ ॥
ಸ್ನಾನ-ಸಂಧ್ಯೆಗಳಿಲ್ಲ । ಮುಟ್ಟು-ಮೈಲಿಗೆ ಇಲ್ಲ ।
ಶ್ವಾನನಂದದಿ ತಿರುಗಿ । ತಿಂದು ಬಳಲಿದೆನೋ.. ॥ ೪ ॥

ಹೊಲಸು ಮತಿಯಲಿ ನಡೆದು ।
ಕಲುಷವಾಯಿತೋ ಬಾಳು ।
ನಿಲಿಸಿ ತಳ್ಳಿತೋ ಇಂದು । ಭವದ ಕೋಟಲೆಗೇ ॥
ಒಲಿಸಲಿಲ್ಲವೋ ನಿನ್ನ । ಬೆಳಸಲಿಲ್ಲವೋ ಭಕುತೀ ।
ಕಲಿಕಾಲ-ದುರ್ಬಲನು । ಪೊರೆ ಶ್ರೀನಿವಾಸಾ.... ॥ ೫ ॥

* * * * *

## ॥ ಶ್ರೀ ತುಳಸೀದೇವಿಯ (ಬೃಂದಾವನದ) ಸ್ತುತಿ-ಪದ ॥

ರಾಗ : ಕೇತಾರ — ತಾಳ : ಏಕತಾಳ

ಪೂಜಿಪೆ ಪಾದಾಂಬುಜಂಗಳಾ ।
ಶ್ರೀ ರಂಗನರಸಿ ತುಳಸಿದೇವಿ ।
ಪೂಜಿಪೇ ಪದಾಂಬುಜಂಗಳಾ ॥ ॥ ಪ ॥

ಮಾಸ ಕಾರ್ತೀಕಶುದ್ಧ। ದ್ವಾದಶೀ ವಿವಾಹ ದಿನದಿ॥ಅ.ಪ॥

ಮೂಲದಲ್ಲಿ ಸರ್ವತೀರ್ಥ ।
ಮಧ್ಯದಲ್ಲಿ ಸರ್ವಸುರರು ।
ಬಾಲೆ ನಿನ್ನ ಪೊಂದಿ ಕೊಂಡು ।
ಮೇಲೆ ಮೆರೆಯೆ ವೇದನಿಕರ ॥ ॥ ೧ ॥

ಹಿಂದೆ ಗಣಪನಿಂದ ಶಾಪ ।
ಪೊಂದಿ ಬೃಂದೆಯೆಂಬ ಅಪ್ಸರೆ ।
ಸಂದ ದೋಷ ಕಳೆಯೆ ಅಸುರ ।
ವೃಂದವಲ್ಲಿ ಜನಿಸಿ ಬಂದೆ ॥ ॥ ೨ ॥

ಕಾಲನೇಮಿಜಾತೆ, ಜಲಂಧರನ ।
ರಾಣಿಯಾಗಿ ಬಾಳಿ ।
ಶೂಲಿಸತಿಯ ಕೆಣಕಿ ಮಡಿಯೆ ।
ಶೀಲಕೆಡಲು ತನುವ ಬಿಸುಟಿ ॥ ॥ ೩ ॥

ಪತಿಯರೂಪ ಧರಿಸಿ ಬಂದು ।
ಸತಿಯ ಶಾಪಕಳೆದ ಹರಿಯ ।
ಗತಿಯ ಕೋರಿ ಶರಣು ಬರಲು ।
ಮತಿಗೆ ಮೆಚ್ಚಿ ವರವನಿತ್ತ ॥ ॥ ೪ ॥

ಅಮೃತ ಕಲಶ ಪೊಕ್ಕುಎನ್ನ ।
ನೇತ್ರ ಬಿಂದು ಧರೆಗೆ ಬೀಳೆ ।
ರಮೆಯ ಆವೇಶ ಪೊಂದಿ ।
ತುಳಸಿಯಾಗೆ ಜಾಂಬವತಿಯು ॥ ॥ ೫ ॥

ತುಳಸಿ ಪೀಠಳಾಗಿ ಜಗದಿ ।
ಸಕಲರಿಂದ ಪೂಜೆಗೊಳ್ಳು ।
ತುಳಸಿಯೊಡನೆ ನಿಲಯ ಮಾಡಿ ।
ಇಳೆಯ ಜನರ ಪೊರೆವೆನೆಂದ ॥ ॥ ೬ ॥

ಮಂಗಳಕರ ದ್ರವ್ಯದಿಂದ ।
ಪೂಜೆ ಮಾಡಿ ವರವ ಕೇಳ್ವೆ ।
ಭಂಗ ಕಳೆದು ಭಾಗ್ಯವೀಯೆ ।
ಶ್ರೀನಿವಾಸನ ಜಾಯೆ ಸಖಿಯೆ ॥ ॥ ೭ ॥

* * * * *

## ॥ ಉದಯರಾಗ ॥

ರಾಗ : ಮೇಚ ಭೌಳಿ　　　　　　　　ತಾಳ : ತ್ರಿಪುಟತಾಳ

ಕಾಡ ಬ್ಯಾಡವೋ ರಂಗಾ । ಆಡೀ ಕೊಂಡಿರೋಕೃಷ್ಣ ।
ನಾಡ ದೈವದ ಪೂಜೆ । ಮಾಡೀಕೊಳ್ಳುವೆ ಕಂದ ॥ ಪ ॥

ಆಡದೇ ನಸುಕೀ ನೋಳ್ । ಪಾಡೇ ರೋಧಿಸುತಿರಲು ।
ನಾಡಿಗರೆಲ್ಲರು । ನೋಡೀ ನಗುವರಯ್ಯಾ.... ॥ ಅ.ಪ ॥

ಅರುಣೋದಯದಲೆದ್ದು । ಪರಿಪರಿವಿಧದಲಿ ।
ಹರುಷಪೂರಿತರಾಗಿ । ಗೃಹಕೃತ್ಯವಾ ॥
ಸರಸೀಜಾಂಬಕಿಯರೆಲ್ಲಾ।
ಮುಗಿಸೀ ಸುಂಭ್ರಮದಲಿಹರೋ ।
ಕರು ಮೊಲೆ ಉಣುತಿದೆ । ಶೆರಗ ಬಿಡು ಬಿಡು ಕೃಷ್ಣ
॥ ೧ ॥

ದುರುಳ ಪೂತನಿಯನ್ನು । ಕೊಲುವಕಾಲದಿ, ಊರ ।
ತರುಣಿ ಮಣಿಯರ ದೃಷ್ಟಿ । ಕ್ರೂರ ವಾದುದೇ ನಿನಗೇ ।
ಉರಗನ ಶಿರದ ಮೇಲ್ । ನಲಿದೂ ನಾಟ್ಯವನಾಡೇ ।
ಗರಳ ಮಾರುತನಿಂದ । ಮರೆಯಾದುದೇ ಜ್ಞಾನ ॥ ೨ ॥

ಕಲಹದಿ ಶಕಟಾಸುರನ । ಕೆಡಹಿದ ಬಾಲ ।
ಯಲಹಂಕ ವಾಸ ಶ್ರೀ । ವೇಣು ಗೋಪಾಲ ।
ಸುಲಲಿತ ಗಮನ । ಸರ್ವೇಶಾ ಸಜ್ಜನ ಪಾಲ ।
ಕಲುಷನಾಶಕ ಶ್ರೀನಿವಾಸ । ಕೈ ಮುಗಿವೆ ಬಾಲ ॥ ೩ ॥

*　*　*　*　*

## ॥ ಸೀತಾ ಸ್ವಯಂವರದ (ಸ್ತುತಿ ಪದ) ವರ್ಣನಾ ॥

ರಾಗ : ಕಲ್ಯಾಣಿ ತಾಳ : ಆದಿತಾಳ

ಜನಕನಂದಿನಿ । ಆನಂದವಬೀರುತ ।
ಬಂದಳು । ನೃಪಸಭೆಗೇ....... ॥ ॥ ಪ ॥
ಇಂದುಧರನ । ಧನುಭಂಗವಗೈದಿಹ ।
ಸುಂದರರಾಮನ । ಪೊಂದುವ ತವಕದಿ ॥ ॥ ಅ.ಪ ॥

ಮೃಗಮದ ತಿಲಕವು । ಅಗಣಿತಾಭರಣ ।
ಬಿಗಿದುಟ್ಟಿಹ । ಪೀತಾಂಬರವೂ ॥
ಝುಗಝುಗಿಸುವತನು । ಕಾಂತಿಯಿಂದೊಪ್ಪುತಾ ।
ಮಿಗೆ ಚೆಲುನೋಟದಿ । ಜಗವ ಮೋಹಿಸುತ ॥ ೧ ॥

ಮಂದಗಮನೆ ತಾ । ಚೆಂದದಿ ಬರುತಿರೆ ।
ವಂದಿ ಮಾಗಧರು । ಬಿಡಿ-ಬಿಡಿ ಪಥವೆನೆ ॥
ಸಂದನೃಪರು ಮನ । ಕಾಮಿನಿಗೊಪ್ಪಿಸಿ।
ಕಂದಿರೆ ಕುಂದಿರೇ । ತಿರುಗಿ ನೋಡದೆಲೆ ॥ ೨ ॥

ಕರದಿಪಿಡಿದ ಸುಮ । ಮಾಲೆಯ ಕೊರಳೊಳು ।
ಪರಮ ಪುರುಷ । ಶ್ರೀ ರಾಮನಿಗರ್ಪಿಸೀ ॥
ನರಕೇಸರಿ । ಶ್ರೀನಿವಾಸನೇ ಪತಿಯೆಂದು ।
ಧರಣಿಜೆಯೊಲಿದಿರೆ । ಸುರರು ಪೊಗಳುತಿರೆ ॥ ೩ ॥

* * * * *

ರಾಗ : ಬಾಗೇಶ್ವರಿ **॥ ದೇವರ ನಾಮ ॥** ತಾಳ : ಝಂಪೆ

ಗತಿಯಾರು ಈ ಜಗದಿ । ಭವದ ಘಸಣೆಯ ಬಿಡಿಸೆ ।
ಅತಿಹಿತರು ಆರಿಹರು । ಎಮ್ಮಾಪ್ತರೊಳಗೇ ॥ ॥ ಪ ॥

ಮತಿಹೀನ ಪಿಶುಣಗಳು । ಜೊತೆ ಬಿಡದೆ ಸಂಸ್ತುತಿಸಿ ।
ಮತಿ ಕೆಡಿಸಿ, ಗತಿ ಕೆಡಿಸಿ। ಸ್ಥಿತಿಯ ಕೆಡೆಸಿದರಯ್ಯ॥ಅ.ಪ॥

ಧನದಾಸೆಯಿಂ ಕೆಲರು । ಅಶನ ವಸನಕೆ ಕೆಲರು ।
ಅನುಸರಿಪ ಆಪ್ತಜನ । ತಾವೆಂದು ಕೆಲಕೆಲರು ॥
ಅನುಬಂಧಿ ನಿಮಗೆಂದು । ಅಭಿಮಾನದಿಂ ಕೆಲರು ।
ಅನುಸರಿಸಿ ಸುಖಪೊಂದಿ । ಅನುವಾಗದಿಹರೋ ॥ ೧ ॥

ನಗುನಗುತೆ ಮಾಡುವೆವು । ಮುಂದಳುತ ಉಣ್ಣುವೆವು ।
ಜಗದೊಳಗೆ ನೈಜ ಸುಖ । ಕಿಂಚಿತ್ತು ಕಾಣೇ ॥
ನಗೆ ಪಾಟಲಾದುದೋ । ಇಂದೆಮ್ಮ ಸಂಸಾರ ।
ನೆಗೆದು ಬಿದ್ದಿತು ಬಾಳು । ಮುಂದೆಲ್ಲಾ ಗೋಳು ॥ ೨ ॥

ಕಪಟ ದ್ಯೂತದಿ ನೊಂದ । ಪಾಂಡವರ ನೀ ಕಾಯ್ದೇ ।
ಉಪಟಳವ ತೊಲಗಿಸಿದೆ । ನಿಜಭಕ್ತರಾ.... ॥
ಉಪಕಾರ ಮರೆಯೆನೋ । ಕೈಪಿಡಿದು ಕಾಪಾಡು ।
ಉಪಮೆ ಕಾಣೆನೋ ದಯೆಗೆ । ಹೇ ಶ್ರೀನಿವಾಸ ॥ ೩ ॥

* * * * *

## ॥ ದೇವರ ನಾಮ ॥

ರಾಗ : ಪೂರ್ವಿ ಕಲ್ಯಾಣಿ ತಾಳ : ಆದಿತಾಳ

ನಿನ್ನ ನೋಡಲಿ ಬಂದೆನೋ । ಗೋಪಾಲ ಕೃಷ್ಣ ।
ನಿನ್ನ ನೋಡಲಿ ಬಂದೆನೋ ॥ ॥ ಪ ॥

ನಿನ್ನ ನೋಡಲಿ ಬಂದೆ । ದೇವ ಪುರೀಶನೇ ।
ಮನ್ನಿಸಿ ಸಲಹೆನ್ನ । ಪಾಪ ಪ್ರಣಾಶನ ॥ ॥ ಪ ॥

ಭಾಮೆ ರುಕ್ಮಿಣಿಯರಸ । ಕಮ್ರರೂಪಧರ ।
ತಾಮರಸಾಕ್ಷ ಶ್ರೀ । ವೇಣುಗೋಪಾಲಾ ॥
ನೇಮದಿಂ ಭಜಿಪರ । ಪಾಲಿಸುವ ಧೊರೆಯೇ ।
ಕಾಮಿತ ಫಲವಿತ್ತು । ಭಕುತರ-ಪೊರೆವೆ ಎಂದು ॥ ೧ ॥

ನೀರೇಜ ದಳನಯನ । ನೀರೇಜನಾಭನೇ ।
ನೀರೇಜ ಭವಪಿತ । ನೀರೇಜಕರನೇ ॥
ನೀರಜಾರಿ ಕುಲ । ಜಾತ ಸುಶೋಭಿತ ।
ನೀರದ-ನೀಲದ । ಗಾತ್ರ-ಪವಿತ್ರ ॥ ೨ ॥

ದಾನವಾಂತಕ ನಿನ್ನ । ಪೊಗಳೆನ್ನಳವೇ ।
ಜ್ಞಾನಿಗಳರಸನೆ । ಚಿನ್ಮಯನೇ..... ॥
ದೀನಜನರ ಮೊರೆಯ । ಲಾಲಿಸಿ ಪೊರೆಯುವ ।
ಶ್ರೀನಿವಾಸನ ಪ್ರತಿ । ರೂಪನೆ ನೀನೆಂದು ॥ ೩ ॥

* * * * *

## ॥ ಲಾಲಿ ಪದ ॥ ಶ್ರೀ ರಾಮದೇವರ ಲಾಲಿ ಪದ ॥

ರಾಗ : ಕುರಂಜಿ ತಾಳ : ಝಂಪೆ ತಾಳ

ಲಾಲಿ ದಶರಥರಾಮ । ಕೋದಂಡರಾಮ ।
ಲಾಲಿ ಸಜ್ಜನ ಪ್ರೀಯ । ಲಾಲಿ ಗುಣಧಾಮಾ ॥
ಲಾಲಿ ಮಾರುತಿ ಪ್ರೇಮ । ವೈಕುಂಠಧಾಮಾ ।
ಲಾಲಿ ಪಾಡುವೆ ಶ್ರೀನಿ । ವಾಸ ಮಹಾಮಹಿಮಾ॥ ಪ ॥

ನರನಾಗಿ ಕೌಸಲ್ಯೆಯಲ್ಲಿ । ನೀ ಜನಿಸೀ ।
ವರಮುನಿಯ ಅನುಸರಿಸಿ। ಯಾಗಪೂರೈಸೀ ॥
ಕರುಣೆಯಲಿ ಶಿಲೆ ಮೆಟ್ಟಿ । ಮುನಿ ಸತಿಯ ಗೈಸೀ ।
ಮುರಿದ್ಯೋನೀ ಹರಧನುವ। ಸೀತೆ ಮನ ವಲಿಸೀ ॥ ೧॥

ಜನಕಂಗೆ ವಲಿದು । ಸೀತೆಯ ಲಗ್ನವಾದೀ ।
ಜನಕನಾಜ್ಞದಿ ಸೀತೆಯೊಡ । ವಿಪಿನಕ್ಹೋದೀ ॥
ಜನಕಜೆಯಕದ್ದವನ । ಪುರಕ್ಹೋಗಿ ಕೊಂದೀ ।
ಜನಕಜೆಯ ವಡಗೂಡಿ । ಪಟ್ಟವನೆ ಆಳ್ದೀ ॥ ೨ ॥

ಪತಿತಪಾವನಜಗಕೆ । ಜಾನಕೀರಾಮ ।
ನುತಿಸಿ ಪಾಡುವೆ ಮಲಗು । ಶ್ರೀರಂಗಧಾಮಾ ॥
ಮತಿಗೆ ಮಂಗಳ ಶ್ರೀನಿವಾಸ । ಶುಭನಾಮ ।
ಸತಿ ಸೀತೆಯೊಡಗೂಡಿ । ಸುಖ ನೀಡು ರಾಮಾ ॥ ೩ ॥

* * * * *

## ॥ ಶ್ರೀ ಲಕ್ಷ್ಮೀ ದೇವಿಯ ಲಾಲಿ ಪದ ॥

ರಾಗ : ಕುರಂಜಿ ತಾಳ : ಝಂಪೆತಾಳ

ಜೋ..............ಜೋ ॥ ॥ ಪ ॥

ಜೋಜೋ ಶ್ರೀ ಭೂ ರಮಣಿ ।
ಜೋಜೊಮಹದುರ್ಗೇ ।
ಜೋಜೊ ಶ್ರೀಮಹಲಕುಮಿ ।
ಜೋಜೊ ಹರಿದಯಿತೇ ॥ ॥ ಅ.ಪ ॥

ಸುರರು ಅಸುರರು ಕೂಡಿ । ಅಮೃತವನೆ ಬಯಸೀ ।
ಗಿರಿಮಂದರಕೆ ಘೋರ । ವಾಸುಕಿಯ ಬಿಗಿಸೀ ॥
ಹರಿಯಾಜ್ಞೆಯಲಿ ಕ್ಷೀರ । ಕಡಲನ್ನೆ ಮಥಿಸೀ ।
ಸೊರಗಿರಲು ಸುಖವೀಯೆ ।
ಬಂದೆನೀ ಜನಿಸೀ । ಜೋ....ಜೋ ॥ ॥ ೧ ॥

ವದಗಿರಲು ಸುರವರರು । ದೋಷಗಳ ತೋರೀ ।
ಮಧುವೈರಿಯನೆ ವರಿಸಿ । ಮುದವನ್ನೆ ಬೀರೀ ॥
ಸದಮಲ ಗುಣ ರೂಪ । ಹರಿಯೆಂದು ಸಾರೀ ।
ಮುದವಿತ್ತೆ ಮೂಜಗಕೆ ।
ಸುಖನೀಡಿ ಗೌರೀ.... । ಜೋ....ಜೋ ॥ ॥ ೨ ॥

ಸೀತೆ ರುಕ್ಮಿಣಿ ಶಾಂತಿ । ಮಾಯೆ ಅಂಭ್ರಣಿಯೇ ।
ಮಾತೆ ಶ್ರೀ ವಟಪತ್ರೆ । ಜಯದೇವಿ ಕೃತಿಯೇ ॥
ಖ್ಯಾತೆ ಪದ್ಮಿಯೆ । ಶ್ರೀನಿವಾಸ ಹಿತ ಜಾಯೇ ।

ಮಾತು ಮನ್ನಿಸಿ ಜಗವ ।
ಪೊರೆಯೆ ಶುಭಕಾಯೇ... । ಜೋ....ಜೋ ॥ ॥ ೩ ॥

* * * * *

## ॥ ಶ್ರೀನಿವಾಸ ದೇವರ ಲಾಲಿ ಪದ ॥

ರಾಗ : ಕುರಂಜಿ ತಾಳ : ಝಂಪೆತಾಳ

ಲಾಲಿ ಶ್ರೀ ಭೂರಮಣ । ಲಾಲಿ ಸರ್ವೇಶಾ ।
ಲಾಲಿ ವೆಂಕಟರಮಣ । ಶ್ರೀ ಶ್ರೀನಿವಾಸಾ.... ॥
ಲಾಲಿ ಭಕ್ತೋದ್ಧರಣ । ಲಾಲಿ ಪದುಮೇಶಾ... ।
ಲಾಲಿ ಪಾಡುವೆ ನಿರುತ ।
ಅಖಿಳ ಲೋಕೇಶಾ ॥ ಲಾಲೀ ॥ ॥ ಪ ॥

ಅಂದು ಭೃಗುಮುನಿ ಒದೆಯೆ । ಬಂದೆಧಾರುಣಿಗೇ ।
ಇಂದಿರೆಯು ನಿಂದಿರದೆ । ಮಂದಿರದಿ ಪೋಗೇ... ॥
ತ್ರಿಂತ್ರಿಣಿಯ ಬುಡ ಹೊದರ । ಸೇರ್ದೆ ನೀಬಿಡದೇ ।
ಕಂದರನು ನೀ ಕಾಯೆ ।
ತಲೆವಡೆದುಕೊಂಡೇ ॥ ಲಾಲೀ ॥ ॥ ೧ ॥

ಬಕುಳೆಮಾಲಿಕೆ ಕೈಲಿ । ನೀ ಸೇವೆಗೊಂಡೇ ।
ಸುಕುಮಾರಿಯರ ಕೆಣಕಿ । ನೀಬಡಿಸಿಕೊಂಡೇ ॥
ಲಕುಮೀಶ ಕೊರವ್ಯಾಗಿ । ನೀ ಭಾಷೆ ಕೊಂಡೇ ।
ಶುಕಮುನಿಯ ದೌತ್ಯದಲಿ ।
ಲಗ್ನ ಕೈ ಕೊಂಡೇ ॥ ಲಾಲೀ ॥ ॥ ೨ ॥

ಸುರಗಣವನೆರಸುತಲಿ । ಶಿರಿಯನ್ನೆ ಕರೆಸೀ ।
ವರನಾಗಿ ಲಗ್ನದಲಿ । ಪದುಮೆಯಳ ವರಿಸೀ ॥

ಪರಿಪರಿಯ ವೈಭೋಗ । ಶ್ರೀನಿವಾಸ ಮೆರೆಸೀ ।
ಧರೆಗೆ ಮಂಗಳವಿತ್ತೆ ।
ಗಿರಿಯಲ್ಲಿ ನೆಲಸೀ ॥ ಲಾಲೀ ॥ ॥ ೩ ॥

* * * * *

## ॥ ಕೋಲು ಪದ ॥

॥ ನವರಾತ್ರಿ - (ತಿರುಪತಿಯ ವೈಭವದ ಬಗ್ಗೆ) ವರ್ಣನೆ
ಸ್ತುತಿಪದ ॥

ರಾಗ : ಆರಭಿ ತಾಳ : ಆದಿತಾಳ

ಕೋಲು ಕೋಲನ್ನಕೋಲೆ । ಕೋಲು ಕೋಲನ್ನ ಕೋಲೆ ।
ಕೋಲು-ಕೋಲನ್ನ ಕೋಲೇ............. ॥
ಕೋಲಿನ ಆಟದಲಿ ಶ್ರೀನಿವಾಸನಗಿರಿ ।
ಲೀಲೆ ಪಾಡುವೆ ಕೋಲೆ ॥ ॥ ಪ ॥

ಭುವನಾಧಿಕ । ವೆಂಕಟಗಿರಿಯೆನಿಸಿತು ।
ತವವಿಭವದಿ । ಹರಿಯೇ ।
ಮೆರೆಯೇ । ತವವಿಭವದಿ ಹರಿಯೇ ।
ನವರಾತ್ರಿಯ । ಉತ್ಸವ ಮಿಗಿಲಾಯಿತು ।
ಸುರನರರಿಗೆ । ಧೊರೆಯೇ ॥ ॥ ೧ ॥

ಗಿರಿವರಕಿಳಿಯಿತು । ಅಜಭವಸುರತತಿ ।
ಹರಿ । ನಿನ್ನಾಜ್ಞೆಯಲೀ ।
ಭಕುತಿಯಲಿ । ಹರಿ ನಿನ್ನಾಜ್ಞೆಯಲೀ ।
ಪರಿಪರಿ ಸೇವೆಯ । ಗೈವರು ನರರಿಗೆ ।
ಕಾಣದ । ರೀತಿಯಲೀ ॥ ॥ ೨ ॥

ಶಿರಿ-ಭೂದೇವಿಯ । ರೆಡಬಲಕೊಪ್ಪಲು ॥
ಮೀರಿದ ವೈಭವದೀ । ಭರದೀ ।
ಮೀರಿದ । ವೈಭವದೀ ।

ಮೆರೆದುದು ಸುಂದರ । ವಾಹನದುತ್ಸವ ।
ಪ್ರತಿದಿನ । ನವವಿಧದೀ ॥ ॥ ೩ ॥

ಮಿಗಿಲಾದುದು । ಗರುಡೋತ್ಸವ ಗಿರಿಯಲಿ ।
ತಿರುಮಲ । ಶಿರಿವರಗೇ ।
ಧರೆಗೇ । ತಿರುಮಲ ಶಿರಿವರಗೆ ।
ಸೊಗಯಿಪ ಬ್ರಹ್ಮೋತ್ಸವ । ಹೆಚ್ಚಾದುದು ।
ಜಗದ ಜನಕೆ । ಕಡೆಗೇ ॥ ॥ ೪ ॥

ಮಾಡುವೆ ವಂದನೆ । ಬೇಡುವೆ ಮುಕುತಿಯ ।
ನೀಡುವೆ । ತನುಮನವಾ ।
ಹರಿಯೇ । ನೀಡುವೆ ತನುಮನವಾ ।
ಪಾಡುವೆ ತವಗುಣ । ಬಾಡದ ಹೃದಯದಿ ।
ಮೂಡಿಸು । ತವಬಿಂಬ ॥ ॥ ೫ ॥

ಬಣ್ಣಿಪುದಸದಳ । ಕಣ್ಣಿಗೆ ಕಂಡರೂ ।
ಜಾಣ್ಮೆಯ । ಮತಿಯುತರು ।
ಸುರವರರು । ಜಾಣ್ಮೆಯ ಮತಿಯುತರು ।
ಕಣ್ಮನ ತಣಿಯವು । ಶಿಲಾರೂಪದಲಿ ।
ಚಿನ್ಮಯ । ತಾನಿರಲು ॥ ॥ ೬ ॥

ನವರಾತ್ರಿಯ । ಉತ್ಸವ ಕಡೆಯಾದುದು ।
ಅವಭೃತ । ಸ್ನಾನದಲಿ ।
ಪುಷ್ಕರಿಣಿ । ಅವಭೃತ ಸ್ನಾನದಲೀ ।
ಅವರಿವರೆನ್ನದೆ । ಮರಳುವರೆಲ್ಲರು ।
ಗಿರಿಯಂದಿಳಿಯುತಲಿ ॥ ॥ ೭ ॥

ಏಸುಜನುಮದಲ್ಲೀ । ಮಾಡಿದ ।
ಸತ್ಕೃತಿ ಪುಣ್ಯದಲೀ । ವದಗೀ ।
ಸತ್ಕೃತಿ । ಪುಣ್ಯದಲೀ ।

ಈ ಸುವಿಶೇಷದ । ಉತ್ಸವ ಕಂಡೆನು ।
ಸತಿಸಹ । ಗಿರಿಯಲ್ಲೀ ॥ ॥ ೮ ॥

ಹಿಂಗಲು ಈ ಭವ । ಮಂಗಳೋತ್ಸವದಿ ।
ಮಂಗಳ ಪಾಡುವೆನು । ಶಿರಿವರಗೆ ।
ಮಂಗಳ । ಪಾಡುವೆನು ।
ಕಂಗಳ ಸಫಲತೆ । ಗಿರಿ ಶ್ರೀನಿವಾಸನ ।
ಮಂಗಳ । ದರುಶನವು ॥ ॥ ೯ ॥

* * * * *

## ॥ ಕುಶಲವರ ಶ್ರೀ ರಾಮಾಯಣ ಗಾನದ ವೈಖರಿ ॥

ರಾಗ : ಪಹಾಡಿ ತಾಳ : ಆದಿತಾಳ

ರಾಮಾಯಣ ಪಾಡೇ । ಕುಶಲವರ್ ।
ರಾಮಾಯಣ ಪಾಡೇ ॥ ॥ ಪ ॥

ಕೋಸಲಾಧಿಪ । ರಾಮಚಂದ್ರ ತಾ ।
ಅಶ್ವಮೇಧಕ್ರತು । ದೀಕ್ಷಿತನಾಗಿರಲ್ ।
ವಿಶ್ವದ ಅತಿ ತೇಜಸ್ವಿಗಳ್ । ಸಭೆಯೊಳು ।
ಅಶ್ವಿನಿ ದೇವತೆಗಳ । ತೆರಮೆರೆಯುತ ॥ ೧ ॥

ಶೃತಿಮಧುರಸ್ವರ । ಸಮ್ಮೇಲನದೊಳು ।
ಗತಿಗೆ ಹಿತವೆನಿಪ । ರಾಗರಂಜನೆಯೋಳ್ ॥
ಮತಿಗೆ ಸೊಗಯಿಸುವ । ಹಾವ-ಭಾವದೊಳು ।
ಅತಿಶಯರೆನುತಿರೆ । ಮುನಿಜನ ಸಭೆಯೊಳು ॥ ೨ ॥

ನರಪತಿ ತನಯರೋ । ಮುನಿಜಾತರೋ ಮೇಣ್ ।
ಸುರಪತಿ ಪ್ರೇಷಿತ । ಸನಕಸನಂದರೋ ॥
ವೀರ ರಾಘವನ ನೆರೆ । ಪ್ರತಿರೂಪರು ।
ಆರೋ, ಅರಿಯೆವು । ಎನುತಿರೆ, ಮುನಿಜನ ॥ ೩ ॥

ಸುರರು ಅಂಬರದಿ ನೆರೆದು । ನಲಿಯುತಿರೆ ।
ನರ ಮೃಗ ಮುನಿಜನ । ಮುಖ ಸುಖ ಸೂಸಿರೇ ॥
ನರಪತಿ ರಾಮನು । ಶಿರವ ತೂಗುತಿರೆ ।
ವರ ವಾಲ್ಮೀಕಿಯ । ಕಾವ್ಯ ಮೊಳಗುತಿರೆ ॥ ೪ ॥

ದಶರಥ ತನಯನ । ದಶಶಿರನಳಿದನಾ ।
ಶಶಿಮುಖಿ ಸೀತೆಗೆ । ಹರುಷವಿತ್ತವನಾ ॥
ಅಸಮ ಬಾರ್ಗವನ । ವರಧನು ಪಡೆದನಾ ।
ಕುಶ-ಲವನೀವನ । ದೇವನ ನೋಡುತಾ ॥ ೫ ॥

ಮಂಗಳಂ ರಾಮಾಯಣ । ಚರಿತೆಗೆ ಶುಭ ।
ಮಂಗಳಂ ಜಾನಕೀ । ನಾಥನಿಗೇ..... ॥
ಮಂಗಳಂ ರಾಮ । ಪದಾಬ್ಜ ಭಜಕರಿಗೆ ।
ಮಂಗಳ ಮೆನ್ನುತ । ಜಾನಕಿ ಕುವರರು ॥ ॥ ೬ ॥

ಶ್ರೀನಿವಾಸ ಶ್ರೀ ರಾಮ । ಕಥಾಮೃತ ।
ವರವಾಲ್ಮೀಕಿಯು । ಕರುಣಿಸಿರಲ್ ॥
ಗಾನವಿಶಾರದರ್ । ಕುಶಲವರ್ ಬಡಿಸಲು ।
ಜಾಣರು ಕರಣದಿ । ನಲಿನಲಿದುಂಡರು ॥ ೭ ॥

* * * * *

ರಾಗ : ತಿಲಂಗ್ (ಉತ್ತರಾದಿ) ತಾಳ : ಏಕತಾಳ

ತಪ್ಪು ಕಾಣೆನಲ್ಲಾ..... ರಾಮನಲಿ । ತಪ್ಪುಕಾಣೆನಲ್ಲಾ.....
॥ ಪ ॥

ನೋಡಲು ಪಾತಕಗೈದು । ಪೆಣ್ಣಾಗಿ ನಾವ್ ।
ಒಡಲ ಪೊರೆಯುತಿಹ । ತಪ್ಪು ಎಮ್ಮದು ಕೇಳು ॥ ೧ ॥

ಪೂರ್ವದ ಕರ್ಮದಿಂ । ದುಃಖ ಸುಖಂಗಳು ।
ಊರ್ವಿಯೊಳುದಿಸಿರೆ । ಅನುಭವ ತಪ್ಪದು ॥ ೨ ॥

ದೋಷರಹಿತ ಶ್ರೀನಿ । ವಾಸ ಸುಜೀವರ ।
ದೋಷವ ಕಳೆಯಲು । ಕ್ಲೇಶ ಪಡಿಸುತಿಪ್ಪ ॥ ೩ ॥

* * * * *

ರಾಗ : ದರ್ಬಾರಿ-ಕಾನಡ ತಾಳ : ರೂಪಕ

ಹರಿಯೆ ನಿನ್ನ ಚರಣದಲ್ಲಿ ।
ಶಿರವನಿರಿಸಿ ಬೇಡುವೇ ॥ ॥ ಪ ॥

ಪರಮ ಕರುಣೆಯಿಂದಲೆನ್ನ ।
ಭವದ ತಾಪ । ಕಳೆಯೋ ನೀ ॥ ॥ ಅ.ಪ ॥

ಧರುಮದಲ್ಲಿ ನಿರುತ ನಿಂದು ।
ನಿನ್ನ ನರ್ಚಿಸೀ............ ।
ಶರಣು ಹೊಕ್ಕ ಜನರ ಪೊರೆವ ।
ಕರುಣ ಮೂರ್ತಿಯೇ.......... ॥ ॥ ೧ ॥

ಪತಿಯ ಹಿತವ । ಬಯಸಿ ಬೇಡುವ ।
ಸತಿಯಮಾತ ಲಾಲಿಸೋ........ ।
ಗತಿಯ ತೋರಿ, ಸುಖದಿ ಬಾಳ್ವ ।
ಮತಿಯನಿತ್ತು ಪಾಲಿಸೋ........ ॥ ॥ ೨ ॥

ದಾರಿಕಾಣದೆ ಕೊರಗುತಿರುವೆ ।
ಪಾರುಗಾಣಿಸೋ........ ।
ನಾರಿಯೆಂದುಪೇಕ್ಷೆ ಬ್ಯಾಡ ।
ಸಾರಿಪೊರೆಯೋ ಶ್ರೀನಿವಾಸಾ....... ॥ ॥ ೩ ॥

* * * * *

## ॥ ಶ್ರೀಪುರಂದರದಾಸರಾಯರ ॥ ಸ್ತುತಿ ಪದ ॥

ರಾಗ : ನಾದನಾಮಕ್ರಿಯೆ ತಾಳ: ಆದಿತಾಳ (ತಿಸ್ರನಡೆ)

(ಮಧ್ಯಮ ಶೃತಿಯಲ್ಲಿ)

("ಈಶ ನಿನ್ನ ಚರಣದೆ ಭಜನೆಯಿಂದ ಮಾಡುವೆನು" ಎಂಬಂತೆ)

ಪೊಂದಿ ಭಜಿಸಿ ದೇವಮುನಿಪ ।
ದಾಸವರ್ಯಪುರಂದರರ ।
ಸಂದ ಕ್ಲೇಶ ಕಳೆದು ।
ಸುಖದ ನಿವಹ ಕೊಡುವುದು ॥

ಇಂದಿರೇಶ ವಲಿದು ನಾ ।
ರಂದ ಮುನಿಗೆ ವರವನಿತ್ತು ।
ಮಂದಜನರ ಕಲಿಯಬಾಧೆ ।
ಬಿಡಿಸು ಎಂದನು ॥

ದ್ವಾರಕಾಧೀಶನಂಘ್ರಿಗೆರಗಿ ।
ಮೋದದಿಂದ ಮುನಿಪ ।
ದಾರಿಕಾದು ಪಾಪ ಯುಗದಿ ।
ಜನಿಸಿ ಬಂದನು ॥

ಸೇರಿಕೊಂಡಿರ್ದ ಶೂದ್ರ ।
ಯೋನಿ ಜನ್ಮದೋಷ ಕಳೆಯೇ ।
ದಾರಿಯಾಯಿತೆಂದು, ಹರನು ।
ಸಾರಿ ಪೇಳ್ದನು ॥

ಇಲ್ಲಿ ಚಿನಿವಾರನಾಗಿ ।
ಪುಟ್ಟಿ ಲೋಭದಿಂದ ಮೆರೆದು ।
ಕಲ್ಲು ಹೃದಯದಿಂದ ।
ಮೂಗುತಿ ವ್ಯಾಜದಿಂದಲೀ ॥

ಕೊಲ್ವಪತಿಗೆ ಸತಿಯು ಲಕ್ಷ್ಮೀ ।
ನಲ್ಲನಿಂದ ಪಡೆದು ತೋರೆ ।
ಕ್ಷುಲ್ಲತನಕೆ ಮರುಗಿ, ಶಿರಿಯ ।
ಬಿಸುಟು ಹೊರಟನು ॥

ಮುಂದೆ ಪಾಂಡುರಂಗ ಅ ।
ಲ್ಲಿಂದ ಮುಂದೆ ವ್ಯಾಸರಾಯ ।
ರಿಂದ ಮಂತ್ರೋಪದೇಶ ।
ಪಡೆದು ಜಪಿಸುತಾ..... ॥

ಇಂದಿರಾಧವನು ವಲಿದು ।
ಬಂದು ನಿಂದು ಹೃದಯದಲ್ಲಿ ।
ಅಂದು ಅಂದ ಮಾತು ನಡೆಸು ।
ಶೀಘ್ರವೆಂದನು ॥

ತಂದೆ ಕೃಷ್ಣ ನಿನ್ನ ಎಲ್ಲಾ ।
ಬಾಲಲೀಲೆ ನೋಡಬಯಸಿ ।
ಬಂದೆನೆಂದು ಅಂದು ।
ಪೇಳ್ದ ಮಾತಿಗುತ್ತರ ॥

ಇಂದುತೋರ್ವೆ ಮನದಿ ನೋಡು ।
ನೋಡಿಕೊಂಡಾಡಿ ಪಾಡು ।
ಮುಂದೆ ನಿನ್ನ ಖ್ಯಾತಿ ಪಿರಿದು ।
ತೋರ್ವೆನೆಂದನು ॥

ಇಲ್ಲಿ ನಿನ್ನ ಪದ ಪದ್ಯ ।
ಶಾಸ್ತ್ರ ಸಮ್ಮತವು, ಮಡಿಯು ।
ಎಲ್ಲ ಬಲ್ಲವರ ಮೌಳಿ ।
ಏರಿ ಮೆರೆಯಲಿ ॥

ನಿಲ್ಲದಂತೋಡಿ ದುರಿತ ।
ಜಗದಜನಕೆ ಹರುಷ-ಭಾಗ್ಯ ।
ಸಲ್ಲುವಂತೆ ಮಾಳ್ಪೆನೆಂದು ।
ವರವನಿತ್ತನು ॥

ವರವನಿತ್ತು ತೆರಳೆ ಹರಿಯು ।
ಅರಿತು ಮೌನಿವ್ಯಾಸ ವರ್ಯ ।
ಪಿರಿದು ಹರುಷಭರಿತನಾಗಿ ।
ನುಡಿದನೀಪರಿ ॥

ಪುರಂದರಾವಿಠ್ಠಲನ ।
ದಾಸರೆನಿಸಿ ಜಗದಿಚರಿಸಿ ।
ಮರುತ ಮತವ ನಿರುತಸಾರಿ ।
ಜಗವ ಪೊರೆಯಿರಿ ॥

ವ್ಯಾಸರಾದೇಶವಿರಲು ।
ಪ್ರಾಣನಾವೇಶ ಧರಿಸಿ ।
ಬ್ಯಾಸರಿಲ್ಲದೆ ದೇಶ ದೇಶ ।
ಚರಿಸಿ ಪಾಡುತಾ॥

ಮೋಸವಿಲ್ಲದ ಬಾಳ್ವೆ ತೋರಿ ।
ಶ್ರೀಶ ಕೃಷ್ಣನ ಮಹಿಮೆ ಸಾರಿ ।
ದಾಸವರದ ಶ್ರೀನಿವಾಸನ ।
ಪುರಕೆ-ಸರಿದರು ॥

* * * * *

## ॥ ಯತಿವರ್ಯರ ॥ ದಾಸವರ್ಯರ ॥ ಫಲ-ಸ್ತುತಿ ಪದ ॥

ರಾಗ : ಆನಂದ ಭೈರವಿ ತಾಳ : ಅಟತಾಳ

ಶೋಭಾನವೆನ್ನಿರಿ । ಶ್ರೀಶ್ರೀನಿವಾಸಗೆ ।
ಶೋಭಾನವೆನ್ನಿರಿ । ಶಿರಿದೇವಿಗೇ ॥
ಶೋಭಾನವೆನ್ನಿ ಶ್ರೀ । ವೇದವ್ಯಾಸಗೆ ।
ಶೋಭಾನವೆನ್ನಿ ಶ್ರೀ। ಪ್ರಾಣೇಶಗೇ॥ ಶೋಭಾನೇ ॥ ಪ ॥

ಮಧ್ವಸಿದ್ಧಾಂತದ । ಪದ್ಧತಿಯೋಳು-ಬಾಳೇ ।
ಸಿದ್ಧ ಮಾತಿದು ಮುಕ್ತಿ । ಕರವಶವು ॥
ಮದ್ಗುರು ಸದ್ಗುರು । ಮಧ್ವರಾಯರು ಎನ್ನೆ ।
ಸದ್ಗತಿಯನ್ನೇ । ಹರಿ ಕೊಡುವ ॥

ಕಾಕುಮತವ ಕೆಡಿಸಿ । ಹೋಕು ಬುದ್ಧಿಯ ಬಿಡಿಸಿ ।
ಸಾಕುವಧೊರೆ ನಮ್ಮ । ಟೀಕಾಚಾರ್ಯ ॥
ನೂಕಿದ ಅಜ್ಞಾನ । ಟೀಕಾಗ್ರಂಥಗಳಿಂದ ।
ವ್ಯಾಕುಲ ಬಿಡಿಸಿದ । ಭುವಿಸುರರ ॥

ಶ್ರೀಪಾದರಾಜರ । ಶ್ರೀಪಾದ ಭಜಕರಿಗೆ ।
ತಾಪವಿಲ್ಲದ । ಸುಖ-ಭೋಜನವೋ ॥
ಶ್ರೀಪಾದರಾಜರ । ಕೃಪೆಯು ಬಂದೊದಗಲು ।
ಶ್ರೀಪತಿ ಅಂತರಂಗದಿ । ನಲಿವಾ ॥

ವ್ಯಾಸರಾಯರ ದಿವ್ಯ । ಚರಣ ಸೇವೆಯ ಮಾಡೆ ।
ಕ್ಲೇಶಗಳೆಲ್ಲವು । ಪರಿಹರವು ॥
ವ್ಯಾಸತ್ರಯ ಮರ್ಮ । ಅರಿತು ಉಪಾಸಿಸೆ ।
ವ್ಯಾಸರೂಪೀ ಕೃಷ್ಣ । ತನ್ನ ನೀವ ॥

ವಾದಿರಾಜರ ಪಾದ । ಶರಣೆಂದು ಭಜಿಸಲು ।
-ಮೋದಿಪೆ ಪರವಾದಿ । ನಿಗ್ರಹದೀ ॥

ಶೋಧಿಪೆ ನಿಜತತ್ವ । ಪಠನ ಪಾಠನದಿಂದ ।
ಸಾಧಿಪೆ ನಿಜಗತಿ । ಇಹಪರದೀ ॥

ಗುರುರಾಘವೇಂದ್ರರು । ಈಧರೆ ಜನರಿಗೆ ।
ಸುರಮಣಿ-ಸುರಧೇನು । ಸುರತರುವೋ ॥
ಗುರುರಾಘವೇಂದ್ರರ । ವೃಂದಾವನ ಸೇವೆ ।
ಪರಗತಿ ಸುಖಕಿಲ್ಲಿ । ಸಾಧನವೋ ॥

ಧರೆಯೊಳು ಪುರಂದರ । ದಾಸರ ನೊಲಿಸಲು ।
ಪರಿಪರಿ ವಿಧದಲ್ಲಿ । ಸುಖ ಉಂಬೆಯೋ ॥
ಚರಿಸುವಿ ಭುವಿಯಲ್ಲಿ । ಪರಮ ಪಾವನನಾಗಿ ।
ಧರಿಸುವಿ ಕೀರ್ತಿಯ । ಸುರನೆನಿಸೀ ॥

ವಿಜಯದಾಸರ ನಂಬಿ । ಪಥಪಿಡಿದು ಸಾಗಲು ।
-ಅಜಪಿತವಲಿದು ತಾ । ಕೈ ಪಿಡಿವಾ ॥
ವಿಜಯದಾಸರ ಕರುಣೆ । ಪಡೆದ ಸಜ್ಜನರಿಗೆ ।
ವಿಜಯಸಾರಥಿ ಕೃಷ್ಣ । ಜಯಕರನು ॥

ಭಜಿಸಿದ ಪ್ರಾಣನ । ಜಪಿಸಿದ ಗಾಯತ್ರೀ ।
ಯಜಿಸಿದ ವಲಿಸಿದ । ಗೋಪಾಲನಾ ॥
ನಿಜದಾಸ ಭಾಗಣ್ಣ । ದಾಸರ ಒಲಿಮೆಯು ।
ಸಜ್ಜೀವರ ಭವ । ರೋಗ ಹರ ॥

ಜಗನ್ನಾಥನೊಲಿಮೆಗೆ । ಸುಜ್ಞಾನ ಭಕುತಿಗೆ ।
ಜಗನ್ನಾಥದಾಸರ । ಪದಭಜಿಸೋ ॥
ನಗಧರನೊಲಿಸಲು । ಜಪ-ತಪ-ಸಾಧನದಿ ।
ನಗಧರಗಳವಲ್ಲಾ । ಕಲಿರಾಜ್ಯದೀ ॥

ಅತಿಶಯ ಮಹಿಮರಿಗೆ । ದಾಸವರೇಣ್ಯರಿಗೆ ।
ಯತಿ ಕುಲ । ತಿಲಕರಿಗೆ ॥
ಕ್ಷಿತಿ ಪತಿ । ಶ್ರೀನಿವಾಸಗೆ ।
ಮಂಗಳ । ಪಾಡಿ ನತಿಸುವೆ ನಡಿಗಡಿಗೆ ॥

## ॥ ಫಲ-ಸ್ತುತಿ ॥

ತತ್ವೇಶರುನಿಂದು । ನುಡಿಸಿದ ಪದವಿದು ।
ಪಥ್ಯವಾಗ್ವುದು ನಂಬಿ । ನಡೆವರಿಗೇ ॥
ಸತ್ಯ ಮಾಡುವ ನಿಜ । ಭೃತ್ಯರ ವಚನವ ।
ಕರ್ತೃ ಉಡುಪಿ ಕೃಷ್ಣ । ಶ್ರೀನಿವಾಸ ॥ ಶೋಭಾ...ನೇ ॥

* * * * *

## ॥ ದೇವತಾ ತಾರತಮ್ಯ ॥ ಫಲ-ಸ್ತುತಿ-ಪದ ॥

(ತೂಗಿರೆ ರಾಯರ-ತೂಗಿರೆ ಗುರುಗಳ-ಎಂಬ ಹಾಡಿನಂತೆ)

ಶೋಭಾನವೆನ್ನಿರಿ । ಶ್ರೀ ಶ್ರೀನಿವಾಸಗೆ ।
ಶೋಭಾನವೆನ್ನಿರಿ । ಶಿರಿದೇವಿಗೇ ॥
ಶೋಭಾನವೆನ್ನಿ ಶ್ರೀ । ವೇದವ್ಯಾಸಗೆ ।
ಶೋಭಾನವೆನ್ನಿ ಶ್ರೀ । ಪ್ರಾಣೇಶಗೆ ॥ ಶೋ...ಭಾ...ನೇ ॥

ಗಜಮುಖ ಶಶಿವರ್ಣ । ಶುಕ್ಲಾಂಬರಧರ ।
ತ್ರಿಜಗದೊಡೆಯ ಬಿಂಬ । ವಿಶ್ವಂಭರನಾ ॥
ಭಜಿಸಲು ಪ್ರತಿಬಿಂಬ । ಗೌರೀ ಪುತ್ರನ ।
ಭುಜಿಸುವಿ ಇಹ-ಪರ । ಸೌಖ್ಯ ಫಲ ॥

ಮತಿದಾತೆ ಸುರಪತಿ । ಗಣಪ ಷಣ್ಮುಖ ಮಾತೆ ।
ದಿತಿಜಾಂತಕೆ ಕಾಳಿ । ಶಿವದಯಿತೆ ॥
ಅತಿಶಯ ಮಹಿಮಳೆ । ಶ್ರೀಪತಿ ಚರಣದಿ ।
ರತಿ ಇತ್ತು ಪೊರೆಯೆಮ್ಮ । ಸತ್ಪಥದೀ ॥

ಪದವೀಲಿ ಹಿರಿಯರು । ಉಮೆಗೆ ಷಣ್ಮಹಿಷಿಯರು ।
-ಸೌಪರ್ಣಿ ವಾರುಣಿ- । ಉಮೆ ಸಮರು ॥
ಇದು ತತ್ವ ಸ್ಥಿರಮನದಿ । ತಿಳಿದು ಕೊಂಡಾಡಲು ।
ಪದುಮಾವತಿ ಪ್ರಿಯ । ತಾನೊಲಿವ ॥

ಮನಸಿಜನುಪಟಳ । ಕಳೆಯೆ ಸಜ್ಜನರೆಲ್ಲ ।
ಮನಸಿಜಾರಿಯ ಪದಕೆ । ಶರಣೆನ್ನಿರೋ ॥
ಘನಕ್ಲೇಶ ತೊಲಗಿಸಿ । ತನುಸೌಖ್ಯ ವದಗಿಸಿ ।
ಮನವನಿಲ್ಲಿಸಿ ಹರಿಯ । ತೋರಿಸುವ ॥

ಅತ್ಯುಪಕಾರಿಯು । ಸುರವರ ನರರಿಗೆ ।
ಮೃತ್ಯುಂಜಯಕೇಳು । ಸಟೆಯಲ್ಲವೋ ॥
ಈತಂಗೆ ಸರಿಸಮರು । ಗರುಡ-ಶೇಷರು ಪದದಿ ।
ಈ ತೆರ ತಿಳಿದವಗೆ । ಕೈವಲ್ಯವೋ ॥

ಭಾರತಿ ದೇವಿಯು । ಭಕುತಿದಾಯಕಿ ಮಾತೆ ।
ಸಾರ ಶಾಸ್ತ್ರದಲ್ಲಿ । ಶಾರದೆಯು ॥
ನಾರದ ವಂದ್ಯ । ಶ್ರೀಹರಿಯಲ್ಲಿ ಸದ್ಭಕ್ತಿ ।
ಸಾರಿದ ಜನಕಿತ್ತು । ಪೊರೆಯುವರು ॥

ಕೃತಿಯಲ್ಲಿ ಪ್ರದ್ಯುಮ್ನ । ನಂಗ ಸಂಭೂತರು ।
ಕ್ಷಿತಿಯಲ್ಲಿ ಪವನ- । ಬೊಮ್ಮನ ಸತಿಯರ್ ॥
ಅತಿ ದುಃಖಕೆದೂಡಿ । ಕಲ್ಯಾದಿದೈತ್ಯರ ।
ಗತಿ ತೋರಿ ಪೊರೆವರು । ಸಜ್ಜೀವರಾ ॥

ಜಾಣರು ಕೃತಕರ್ಮ । ಹರಿಗೆ ಸಮರ್ಪಿಸಿ ।
ಪ್ರಾಣ ಪ್ರತೀಕದಿ । ಸುಖ ಉಂಬರು। (ರೋ) ॥
ಪ್ರಾಣೇಶನೊಲಿಯಲು । ಹರಿತಾನೊಲಿವನು ।
ಪ್ರಾಣ ಕೈಬಿಡೆ । ತಾನೂ ಕೈಬಿಡುವ ॥

ಇವನ ಮತವೇ ಮತ । ಹರಿಗೆ ಸುಸಮ್ಮತ ।
ಇವನ ಮತವೇ । ವೇದಶಾಸ್ತ್ರ ಮತ ॥
ಇವನೇ ಸದ್ಗತಿ ದಾತ । ನರಹರಿ ಆಜ್ಞೇಲಿ ।
ಇವನೇ ಮೋಕ್ಷಪ್ರದ । ಸುಖತೀರ್ಥನು ॥

ಸುರಪತಿಗಾಶ್ರಯ । ಬಲದಾತ-ಗಿರಿಜೇಶ ।
ಗಿರಿಜೇಶಗೆ ತ್ರಾಣ । ಪ್ರಾಣ ಪತಿ ॥
ಹರಿವರ-ಭೀಮ ಶ್ರೀ । ಮಧ್ವ ರೂಪವ ತಾಳಿ ।
ಶಿರಿಯರಸನ ಕಾರ್ಯ । ಸಾಧಿಸುವ ॥

ಮಾಯಾದೇವಿಯಲ್ಲಿ । ವಾಸುದೇವಗೆ ಜನಿಸಿ ।
ವಿರಿಂಚಿ ಚತುರ್ಮುಖ । ಬ್ರಹ್ಮನಾದ ॥
ಶ್ರೀಜಯಾದೇವೀಲಿ ಸಂ । ಕರ್ಷಣನಿಂದ ।
ಈ ಸೂತ್ರ ಉದಿಸಿ ತಾ । ಪ್ರಾಣನಾದ ॥

ಇವರೀರ್ವರ ಕರುಣೆ । ಪಡೆದ ಸಜ್ಜನರಿಗೆ ।
ದೀರ್ಘಾಯು ಸಂಪದ । ಮೋಕ್ಷ-ಸುಖ ॥
ಭವನಾಶ, ಭುವನೇಶ । ತಂದೀವ ಸಟೆಯಲ್ಲ ।
ಪವನ ವಿದ್ವೇಷಿಗೆ । ಸುಖವಿಲ್ಲವೋ ॥

ಅಜಭವಾದ್ಯರ ಜನನಿ । ಸಕಲ ಶ್ರುತ್ಯಭಿಮಾನಿ ।
ತ್ರಿಜಗನ್ನಾಯಕಿ ಸುಗುಣೆ । ಕಲಭಾಷಿಣೀ ॥
ಭಜಿಸುವೆ ತವಪಾದ । ಗಜವರದನ ರಾಣಿ ।
ಸೃಜಿಸೆಮ್ಮ ಆನಂದ- । ಸಂದೋಹವ ॥

ಅಗಣಿತ ಮಹಿಮಳೆ । ತ್ರಿಗುಣ ವರ್ಜಿತಗಾತ್ರೆ ।
-ಜಗದಂಬೆ ಕರುಣಿಸು । ಅಕ್ಷರಳೇ ॥
-ನಗಧರನರಸಿಯೆ । ನಗುಮೊಗದಿಂದಲಿ ।
ಮಗನ ಮಂದಿರವೆಂದು । ನೀ ನೆಲಸೇ ॥

ಕ್ಷೀರಾಬ್ಧಿ ಕನ್ನಿಕೆ । ಶಿರಿದೇವಿ ಮಹಲಕ್ಷ್ಮೀ ।
ಧೀರಾ ಶ್ರೀಕೃಷ್ಣನ । ಸತಿ ರುಕ್ಮಿಣೀ ॥
ನೀರಾಜನ ಕದಲಾರತಿ । ಬೆಳಗುವೆ ।
ನೀರೇಜಮುಖಿ । ಕೊಡು ಸೌಭಾಗ್ಯವ ॥

ಶಿಷ್ಟರ ಸಲಹುವ । ದುಷ್ಟರ ಸದೆವ । ವಿ,-।
ಶಿಷ್ಟ ರೂಪದಿ ಮೆರೆವ । ಶ್ರೀಹರಿಯೇ ॥
ಕಷ್ಟವ ಬಿಡಿಸಿ ಉ । ತ್ಕೃಷ್ಟನ್ನ ಮಾಡಿ । ಕ,-।
ನಿಷ್ಟನ್ನ ಸಲಹೋ । ಶ್ರೀ, ನರಹರಿಯೇ ॥

ನೊಂದು ಈ ಭವದೊಳು । ಬೆಂದು ಹೋಗಿಹೆನಯ್ಯ ।
ಕಂದರ್ಪನಯ್ಯ ನೀ । ಕಾಯಬೇಕೋ ॥
ಮಂದರಧರ ಗೋ । ವಿಂದ ಮುಕುಂದನೆ ।
ಸುಂದರ ಗುಣ-ರೂಪ । ಶರಣೆಂಬೆನೋ ॥

ಮತ್ಸ್ಯರೂಪದಿವೇದ । ಅಜಗಿತ್ತು ಸಲಹೀದಿ ।
ಮತ್ತೆ ಮಂದರಪೊತ್ತು । ಕೂರ್ಮನಾದೀ ॥
ಪೃಥ್ವಿಯನೆತ್ತಿದಿ ವರಹರೂಪದಿ । ನಿಜ- ।
ಭೃತ್ಯನ್ನ ಸಲಹಿದೀ । ನರಹರಿಯೇ ॥

ಸರಿಸಿದಿ ಬಲಿಯನ್ನು । ಸುರಪತಿ ಪೀಠದಿಂ ।
ವರ ವಿಪ್ರವಟುವಾಗಿ । ವಾಮನನೇ ॥
ಧರಿಸಿ ನೀ ಕೊಡಲಿಯ । ತರಿದುಕ್ಷತ್ರಿಯರನ್ನು ।
ಮೆರೆಸಿದಿ ಶೌರ್‍ಯವ । ಭಾರ್ಗವನೇ ॥

ತರಿದಿ ರಾವಣ ಕುಲವ । ಮುರಿದಿ ಕಂಸನ ಬಲವ ।
ತೊರೆದು ವಸ್ತ್ರವ ಇಳೆಯೋಳ್ । ಬುದ್ಧನಾದೀ ॥
ಭರದಿ ಕುದುರೆಯೇರಿ । ಕಲಿದುಷ್ಟರ ಕೊಂದು ।
ಮೆರೆಸಿದಿ ವೈಭವ । ಶ್ರೀಕೃಷ್ಣನೇ ॥

ಮಂಗಳ ಮಹಿಮಗೆ । ಮಂಗಳ ರೂಪಗೆ ।
ಮಂಗಳೆಯರಸಗೆ । ಮಂಗಳಗೆ ॥
ಮಂಗಳೋತ್ಸವಕೊಂಬ । ವರ ಶ್ರೀನಿವಾಸಗೆ ।
ಮಂಗಳ ಪದ ಪಾಡಿ । ಬಲಗೊಂಬೆನು ॥

## ॥ ಫಲ-ಸ್ತುತಿ ॥

ಆಯಸ್ಸು ಆರೋಗ್ಯ । ಐಶ್ವರ್ಯ ಫಲಭೋಗ ।
ಕಾಯಜಪಿತ ನೊಲಿಮೆ । ದೊರಕಿಪುದು ॥
ಮಾಯದ ಸಂಸಾರ । ಮಮತೆಯ ತೊಲಗಿಸಿ ।
ಶ್ರೇಯೋಮಾರ್ಗದಿ ನಿಮ್ಮ । ನಡೆಸುವುದು ॥

ಮೋಸಬುದ್ಧಿಯ ಬಿಟ್ಟು । ಈಶಭಾವವ ಸುಟ್ಟು ।
ದಾಸಭಾವದಿ ಹರಿಯ । ಭಜಿಪರಿಗೇ ॥
-ನಾಶರಹಿತ ಶ್ರೀನಿವಾಸನು । ಹರುಷಿಸಿ ।
ಕೂಸಿನಂದದಿ ನಿಮ್ಮ । ಪೋಷಿಪನು ॥

ಅನುದಿನ ಮನೆಯಲ್ಲಿ । ಈ ಪದವ ಪಠಿಸಲು ।
ಜನುಮ ಜನುಮದಘ । ಪರಿಹರವು ॥
ಅನುಮಾನ ಪಡೆಸಲ್ಲ । ಸದ್ಭಕ್ತಿ ಶುಭಯೋಗ ।
ಹನುಮನೊಡೆಯ । ಶ್ರೀನಿವಾಸ ಈವ ॥ ಶೋಭಾನೆ ॥

* * * * *

## ॥ ಮಂಗಳ ಪದ ॥

ರಾಗ : ಸೌರಾಷ್ಟ್ರ ತಾಳ : ಆದಿತಾಳ

ಮಂಗಳ ಪದ ಪಾಡುವೇ । ....ಸ್ವಾಮೀ.... । ॥ ಪ ॥
ತಿಂಗಳ ಮೊಗದಾ...ಶ್ರೀ । ತುಂಗವಿಕ್ರಮಗೇ....॥ ಅ.ಪ ॥

ಗಂಗೆಯಪೆತ್ತ ಶ್ರೀ । ನಾರಾಯಣನಿಗೆ ।
ಭಂಗಬಿಡಿಪ ಪಾಂಡು । ರಂಗನಿಗೇ...... ॥
ಶೃಂಗಾರಶಯ್ಯೆಯ । ಶ್ರೀರಂಗನಾಥನಿಗೆ ।
ಡಿಂಗರ ಸಲಹುವೋ । ವರದ ರಾ.....ಜನಿಗೆ ॥ ೧ ॥

ಮತ್ಸ್ಯಾವತಾರಗೆ । ಮಂದರಪೊತ್ತವಗೇ ।
ಪೃಥ್ವಿಯ ನೆತ್ತಿದಗೆ ॥ ನರಹರಿಗೇ ॥

ಸ್ತುತ್ಯವಾಮನಗೆ । ನಿತ್ಯ ಭಾರ್ಗವಗೆ ।
ಸತ್ಯಧರ್ಮರಿಗೊಲಿದ । ಸೀ..ತಾ...ಪತಿಗೇ.... ॥ ೨ ॥

ಧರೆಯೊಳಧಿಕ ಶ್ರೀ । ರುಕ್ಮಿಣಿಯರಸಗೆ ।
ಅರಿವೆಕಳೆದು ನಿಂತ । ಬೌದ್ಧನಿಗೇ ॥
ದುರುಳರ ಶಿರತರಿದ । ಕಲ್ಕಿರೂಪನಿಗೆ ।
ವರ ವೇಂಕಟಾಧಿಪ । ಶ್ರೀ ಶ್ರೀನಿವಾಸಗೇ । ॥ ೩ ॥

॥ ಅಸ್ಮದ್ಗುರ್ವಂತರ್ಗತ, ಶ್ರೀ
ಭಾರತೀಶಾಂತರ್ಯಾಮಿ-ಶ್ರೀಕೃಷ್ಣಾರ್ಪಣ ಮಸ್ತು ॥

* * * * *

ರಾಗ : ತಿಲಂಗ್ ತಾಳ : ಆದಿತಾಳ

ಬಾ-ರೋ-ಕಲಿಹರ । ಕಲುಷ ವಿದೂ-ರಾ ।
ಮೆರೆಯುವ ಪೀಠಕೆ । ಬಾ. ರೋ ॥ ॥ ಪ ॥

ವಾರಿಜಾಪ್ತಸುತ । ವೈರಿ ವಿನುತ । ಭುವ ।
ನೇಂದ್ರನಾಥ ಸುರರಾಜ । ವಿನೋದಿತ ॥
ಕ್ರೂರದನುಜ ಸಂಹಾರ । ಜಯಾರ್ಚಿತ ।
ಸಾರ ಸಾಕ್ಷಿಯೊಳು । ಮೆರೆಯುತ ನಲಿಯುತ ॥ ೧ ॥

ವಾಸುಕೀಶ ವಸುಧೀಶ । ಕೃಪಾರಸ ।
ಕೋಶರಾಶಿ ಕುಸುಮಾವಳಿ । ಶೋಭಿತ ॥
ದಾಸಕೋಟಿ ಯಘ । ಕೋಟಿ ವಿನಾಶಕ ।
ನಾಶರಹಿತ । ಆಯಾಸಗೊಳ್ಳದೆಲೆ ॥ ॥ ೨ ॥

ದಾನವಾರಿ ಸನ್ । ಮೌನವ ತಳೆದೂ ।
ಮಾನಿನಿಯಳಮನ । ಕ್ಲೇಶವ ಕಳೆದು ॥
ಸಾನುರಾಗದಿಂ । ಪೀಠದೊಳೆಸೆದೂ ।
ಶ್ರೀನಿವಾಸ । ವರ್ಯಾಶ್ರಿತ ಪಾಲಕ ॥ ॥ ೩ ॥

* * * * *

## ॥ ಹಸೆಗೆ ಕರೆದ ಪದ ॥

ರಾಗ : ಕಾಪಿ (ಮಿಶ್ರ ಪೀಲು) ತಾಳ : ಆದಿತಾಳ

ನೋಡುವೆ ಸುಂದರರದ್ಧಸೆಯೊಳು ನಿನ್ನ ।
ನೋಡುವೆ ಸುಂದರರದ್ಧಸೆಯೊಳ್ ॥ ॥ ಪ ॥

ನೋಡುವೇ ಪಾಡುವೇ । ನಿನ್ನ ॥ ॥ ಅ.ಪ ॥

ತಾಪಸಿಯಳ । ಸಂತಾಪ ನಿವಾರಕ ।
ಕೋಪಿಸದೆನ್ನೊಳು ಬಾರೈ । ಕೋಪಿಸದೆನ್ನೊಳು ಬಾರೈ ॥
ಭೂಪತಿಸುತನೀ । ನಾಕಪತಿ ಪ್ರಿಯ ।
ದೀಪಕ ಯದುಕುಲ ಬಾರೋ । ನಿನ್ನ ॥ ॥ ೧ ॥

ನಂದನ ವನದೊಳು । ಇಂದು ವದನೆಯರು ।
ಚಂದದಿ ಪಾಡುತಲಿರಲೂ । ಚಂದದಿ ಪಾಡುತಲಿರಲೂ॥
ಮಂದಿರದೊಳು ಪಾಲ್ । ಬೆಣ್ಣೆಯ ಹರಿಸಿದ ।
ಸುಂದರ ರೂಪನೆ ಬಾರೋ । ನಿನ್ನ ॥ ॥ ೨ ॥

ಮಾನಿತ ಶುಭಗುಣ । ಶೀಲವಿಭೂಷಣ ।
ದೀನಜನಾವನ ಬಾರೈ । ದೀನಜನಾವನ ಬಾರೈ ॥
ಮಾನಿನಿಯಾ । ಮನೋವ್ಯಥೆ ಹರಿಸಿದ ।
ಶ್ರೀನಿವಾಸ ನಲಿದಾಡೈ । ನಿನ್ನ ॥ ॥ ೩ ॥

* * * * *

## ॥ ಉರುಟಣೆ ಪದಗಳು ॥

ರಾಗ : (ಮಿಶ್ರಪಹಾಡಿ) ಮಿಶ್ರಕಾಪಿ ತಾಳ : ಆದಿತಾಳ

ಉರುಟಣೆಗೈವೇನು ನಾ । ಮಾರಮಣಾ ।
ಉರುಟಣೆಗೈವೇನು ನಾ ॥ ॥ ಪ ॥

ವಾರಿಜ ಭವಪಿತ । ಸುರಗಣ ಪೋಷಕ ।
ಅರಿಶಿನ ನಾ ನೊರೆವೇ। ಸ್ವಾಮೀ। ಅರಿಶಿನ ನಾನೊರೆವೇ॥
ಸಾರಸುಧಾಕರ । ಪ್ರೇರಕ ಶುಭಕರ ।
ಹೀರಮುಕುಟ । ಕೇಯೂರಾವಿರಾಜಿತ ॥ ॥ ೧ ॥

ಪಂಕಜಲೋಚನ । ಪಂಕೇರುಹ ಪದ ।
ದ್ವಂದ್ವಕೆನಾನಮಿಸೀ । ಈ ಪದ । ದ್ವಂದ್ವಕೆ ನಾ ನಮಿಸೀ॥
ಕಿಂಕರಳಾಗಿ ನಾ । ವೇಂಕಟಾಧಿಪನ ।
ಬಿಂಕದ ಮುಖಕೆ ಈ । ಕುಂಕುಮ ಅರ್ಪಿಸೀ॥ ॥ ೨ ॥

ಧ್ಯಾನಿಗಳನುದಿನ । ಧೇನಿಸಿ ಸುಖಿಸುವೋ ।
ಧ್ಯಾನಿ-ಕುಲೋದ್ಧರಗೇ । ಧ್ಯಾನಿ-ಕುಲೋದ್ಧರಗೇ ॥
ಮಾನಿನಿಯಳ । ಅಭಿಮಾನದಿಕಾಯ್ದಿಹ ।
ಮಾನನಿಧಿಗೆ ಶ್ರೀ । ಗಂಧವಲೇಪಿಸೀ ॥ ॥ ೩ ॥

ನಂಬಿದ ಬಾಲಗೆ । ಕಂಭದಿ ವದಗುತೇ ।
ಬೆಂಬಲವಿತ್ತವಗೇ । ಬೆಂಬಲವಿತ್ತವಗೇ ॥
ಅಂಬರೀಷ ವರ । ದಾಯಕನೆನಿಸುವ ।
ತುಂಬುರನುತಗೆ ತಾಂ । ಬೂಲವನರ್ಪಿಸೀ ॥ ॥ ೪ ॥

ಕಾಮಿನಿಮಣಿ ಸತ್ಯ । ಭಾಮೆಯ ವರಿಸಿದ ।
ಕೌಮೋದಕಿ ಧರಗೇ । ಕೌಮೋದಕೀ ಧರಗೇ ॥
ಕಾಮಿತ ಫಲದಾಯಕ । ಶ್ರೀನಿವಾಸಗೇ ।
ಕಾಮಜನಕ ನಿಷ್ಕಾಮನ । ಮೂರ್ತಿಗೇ ॥ ॥ ೫ ॥

* * * * *

ರಾಗ : ಭೀಂಪಲಾಸ್ (ಅಭೇರಿ) ತಾಳ : ಆದಿತಾಳ

ದಶರಥರಾಜ ಕುಮಾರಾ । ಗಂಭೀರಾ ।
ಸುಕುಮಾರಾ । ಪೀಠಕೆ ಬಾರೋ ಪ್ರವೀರಾ ॥ ॥ ಪ ॥

ಕದಪುಗಳಿಗೆ ನಾಂ । ಅರಿಶಿನ ಹಚ್ಚುವೆ ।
ಮದನ ಜನಕ ಮುಖನೀಡ್ಯೆ ।
ಮನಮಾಡ್ಯೆ ನಲಿದಾಡ್ಯೆ ।
ಸಖಿನಾಂ ನಿಂದಿಹೆ ನೋಡ್ಯೆ ॥ ॥ ೧ ॥

ಪಂಕಜಾಪ್ತಸಮ । ಪಂಕಜ ವದನಗೆ ।
ಬಿಂಕದ ಸುರವರ ಹರಿಗೇ ।
ನರಹರಿಗೇ । ಶಿರಿವರಗೇ ।
ಕುಂಕುಮ ಹಚ್ಚುವೆ ಧೊರೆಗೇ ॥ ॥ ೨ ॥

ತುಂಗ ವಿಕ್ರಮಗೆ । ಗಂಧಸು ಪರಿಮಳ ।
ಮಂಗಳ ಮಣಿಮಯ ಹಾರಾ ।
ರಘುವೀರಾ । ಸುಮಹಾರಾ ।
ಕಂಠಕೆ ಹಾಕುವೆ ಧೀರಾ ॥ ॥ ೩ ॥

ಸುಗುಣಗಣಂಗಳಿಗಾಶ್ರಯ ನಾಥನೇ ।
ಜಗಮಲ್ಲರಮದಮುರಿದಾ ।
ಧನುಮುರಿದಾ । ಸುಖ ಸುರಿದಾ ।
ಕರಕೇ ವೀಳ್ಯವು ವರದಾ ॥ ॥ ೪ ॥

ಶ್ರೀನಿವಾಸ ನಿನಗಾರತಿ ಬೆಳಗುವೆ ।
ತೋರ್ಯೆ ನಿನ್ನಯ ಕರುಣಾ ।
ಶುಭ ಚರಣಾ । ಅಘಹರಣಾ ।
ನಮಿಸುವೆ ಪ್ರೇಮದಿ ರಮಣಾ ॥ ॥ ೫ ॥

* * * * *

॥ ಇದು ಉರುಟಣೆ (ವರ ಕನ್ಯೆಗೆ ಮಾಡುವಾಗ) ಮತ್ತು ಶ್ರೀ ಲಕ್ಷ್ಮೀಪೂಜೆಗೆ ಇದನ್ನು ಉಪಯೋಗಿಸಬಹುದು ॥

ರಾಗ : ಆನಂದ ಭೈರವಿ ತಾಳ : ಆದಿತಾಳ

ಬಾಬಾಚಂದ್ರ ಮುಖಿ । ಸುಪೀಠಕೆ ।
ಬಾಬಾ ಚಂದ್ರಮುಖೀ ॥ ॥ ಪ ॥

ಸುದತಿಯರೆಲ್ಲರು । ನೆರೆದು ಕರೆಯುತಿರೆ ।
ಮುದದಿಂದಲಿ ನಿ । ನ್ನುರುಟಣೆ ರಚಿಸುವೆ ॥ ॥ ಅ.ಪ ॥

## (ಪೂಜೆಗಾಗಿ)

ಸುದತಿಯೆರೆಲ್ಲರು । ಮುದದಿ ಕರೆಯುತಿರೆ ।
ಮೃದುಹಾಸದಿ - ಮೆ । ಲ್ಲಡಿಗಳನಿಡುತಲಿ ॥ ಅ.ಪ ॥

ಜಲಜಾಸಂಭವೆ ಮೋಹನರೂಪೇ ॥
ಜಲಜಾಯತಲೋಚನೇ ।
ಜ್ವಲಿಪಾ ರನ್ನದಂತ್ಥೊಳೆವ ಕಪೋಲೇ ॥
ಸುವಿಶಾಲೆ ಸುಶೀಲೇ ।
ಮೆರೆಯುವಾಭರಣ ವಿಜೃಂಭಿತ ಬಾಲೇ ॥
ಥಳಥಳಿಸುವ ಕುಂಡಲಗಳ ಕಾಂತಿಯಿಂ ।
ದ್ಥೊಳೆವ ಕಪೋಲಕೆ-ಅರಿಶಿನ ಹಚ್ಚುವೆ ॥ ॥ ೧ ॥

ಪಂಕಜ ವದನೆಯೇ ಬಾ ॥ ಶಶಾಂಕ ಸಹೋದರಿ ।
ಬಿಂಕವ ತೊರೆಯುತ ಬಾ ॥ ಮೀನಾಂಕನ ಮಾತೆಯೇ ।
ಶಂಕರ ವಂದ್ಯಳೇ ಬಾ ॥
ಪಂಕಜೆತವಮುಖ ಪಂಕಜ ತೋರಲು ।
ಸಂಕಟಹರವಹ । ಕುಂಕುಮ ಹಚ್ಚುವೆ ॥ ॥ ೨ ॥

ಖಗರಾಜಗಮನನ । ಪ್ರೇಮಕೆ ಪಾತ್ರೆ ।
ರಘುನಾಥ ಕಳತ್ರೇ । ತ್ರಿಗುಣ ವರ್ಜಿತೆ ।
ಚಂಚಲನೇತ್ರೇ । ವಟಪತ್ರೆ ಪವಿತ್ರೆ ॥

ಜಗದಾನಾಯಕಿ ಮಂಗಳಗಾತ್ರೇ ।
ಝುಗಿಝುಗಿಸುವ ದಿವ್ಯಾಂಬರೆಗಂಧವ ।
ತೆಗೆದು ಪೂಸುವೆನು । ಅಂಗನೆಯರ ಮಣಿ ॥ ॥ ೩ ॥

ಮರುಗಾ ಮಲ್ಲಿಕಾ ಚಂಪಕ ಸುರಗೀ ।
ಕೀಲಾಲಜ ಸುಮಗಳ ।
ವರವಜ್ರ ಸುಂದರ ಮರಕತ ಮಣಿಯಿಂ ।
ವಿರಾಜಿಸೆ ಮುದಕರ ।
ಹರಿನೀಲ ಮೌಕ್ತಿಕ ಮಣಿಗಣಯುತದಿಂ ॥
ವಿರಚಿಸಿ ಪರಿಪರಿಹಾರಗಳ್ಹಾಕುವೆ ।
ಸುರನರವಂದಿತೆ ಕಂಬು ಕಂಧರಿಯೇ ॥ ॥ ೪ ॥

ಕನಕಾಭರಣ ಭೂಷಿತೆ । ಕನಕೋದರ ಮಾತೇ ।
ಸನಕಾದಿ ಮೌನಿ ವಿನುತೆ । ಘನತಾಪ ವಿಘಾತೇ ।
ಅನುಪಮಗುಣ ಭರಿತೇ ॥
ಸನುಮತದಿಂದೀ ವೀಳ್ಯವ ಕೊಳ್ಳುತ ।
ಅನುಕರಿಸೆನ್ನನು । ಬಿಂಬಾಧರಯುತೆ ॥ ॥ ೫ ॥

* * * * *

## (ಪೂಜೆಗಾಗಿ ಈ ನುಡಿ)

ಉಡುರಾಜಮುಖಿಯೆ, ಸಾಗರ ಸದನೆ!
ಗಂಭೀರ ಗಮನೇ ।
ಬಿಡೆನಮ್ಮಾ ಅಡಿಗಳ ಮಂಗಳವದನೆ ।
ಮೊರೆ ಹೊಕ್ಕೆನಮ್ಮಾ ।
ಬಿಡಿಸೆಮ್ಮಾ ಬಾಧಿಪ ಈ ಭವ ಘಸಣೆ ॥
ಅಡಿಗಡಿಗಾರತಿ ಬೆಳಗುತೆ ಬೇಡುವೆ ।
ಕೊಡು ಶುಭವರಗಳ । ಮೃಡಸತಿ ವಂದಿತೆ ॥ ॥ ೬ ॥

* * * * *

ಭಳಿರೇ ಕ್ಷೀರಾಂಬುಧಿ ಶಯನನ ರಾಣೀ ॥
ಶಂಖಾಭಿಮಾನೀ ।
ಕಾಳಾಹಿ ಸನ್ನಿಭ ಮಂಗಳವೇಣಿ ।
ಬಲುಜಾಣೆ, ಶುಶ್ರೋಣಿ ॥
ಕಲಹಂಸ ಗಮನೆಯೆ । ಕೋಕಿಲ ವಾಣೀ ।
ಕಲಿನಾಶಕ ಶ್ರೀನಿವಾಸನ ಚರಣವ ।
ಕಲಕಾಲವು ಸೇವಿಸಿ ಸುಖಿಯಾಗಿರೆ ॥ ॥ ೭ ॥

## (ಚೆಂಡಾಡುವ ಪ್ರಸಂಗ)

ಮಲ್ಲಿಗಿ ದಂಡೆಯ ಕಂದುಕ ಪಿಡಿದು ।
ಗುರಿ ನೋಡುತ ಹೊಡೆದು ।
ಗೆಲ್ಲುವ ಮನದಲಿ ಸಾಧಿಸಿ ನಡೆದು। ಅಭಿಮಾನ ಪಿಡಿದು।
ನಲ್ಲೆ ನಿನ್ನಂತರಂಗಕೆ ಒಲಿದು ॥
ಬಲ್ಲಿದನೆಂಬುದ ನಿಲ್ಲೆ ನಾ ತೋರುವೆ ।
ಬಲ್ಲಿದರಿಗೆ ಒಣ । ಸೊಲ್ಲುಗಳ್ಯಾತಕೆ ॥ ॥ ೬ ॥

* * * * *

## (ವಧು-ವರನಿಗೆ)

ರಾಗ : ಶುದ್ಧ ಧನ್ಯಾಸಿ ತಾಳ : ಆದಿತಾಳ

ಬಾಬಾ ಉರುಟಣೆಗೆ । ಪ್ರಿಯಕರನೆ ।
ಬಾಬಾ ಉರುಟಣೆಗೆ ॥ ॥ ಪ ॥
ಬಾಬಾ ಪ್ರಿಯಸಖನೇ । ಸುಪೀಠಕೆ ।
ಬಾಬಾ ಪ್ರಿಯತಮನೇ ।
ಬಾಬಾ ಹೃದಯದ ಮಂದಿರ ಚಂದಿರ ।
ಬಾಬಾ ಉರುಟಣೆಗೇ ॥ ॥ ಅ.ಪ ॥

ಕನ್ನಡಿ ಪೋಲ್ವ ಕಪೋಲಕೆ ಕನ್ಯೆ ನಾ। ಅರಿಶಿನ ಹಚ್ಚುವೆನು।
ಶುಭೋದಯ । ಅರಿಶಿನ ಹಚ್ಚುವೆನು ॥
ಮನದನ್ನನೆ ರನ್ನ- ದಂಥೊಪ್ಪೊಳಿವ ಸುಫಾಲಕೆ ।
ಇಡುವೆನು ಕುಂಕುಮವಾ । ಸಡಗರದಿ ।
ಇಡುವೆನು ಕುಂಕುಮವ ॥ ॥ ೧ ॥

ಮಂದರಧರ ನಿನ್ನಂಗಕೆ ಪರಿಮಳ । ಗಂಧವ ಪೂಸುವೆನು।
ಪರಿಮಳದ । ಗಂಧವಪೂಸುವೆನು ॥ ಸುರ । ವಂದ್ಯನೆ ।
ಕಂಠವನೀಡ್ಯೆರತುನದ । ಮಾಲೆಗಳ್ಹಾಕುವೆನು ।
ಸುಮಂಗಳ । ಹಾರವನ್ಹಾಕುವೆನು ॥ ॥ ೨ ॥

ಪರಿಣಯದಲಿನಾಂ ಸವಿಯಲು ವದನಕೆ ।
ತಾಂಬೂಲವ ಕೊಡುವೆ ।
ಕರದೊಳಗೆ ಸ್ವೀಕರಿಸೈ ಪ್ರಭುವೇ ॥
ಸರಸಿಜಭವನುತ ವರಶ್ರೀನಿವಾಸನ ।
ಕರುಣದಿ ನಾಂ ಬಾಳ್ವೇ । ನಮಿಸುತಲಿ ।
ಶುಭವನು ನಾ ಕಾಣ್ವೇ ॥ ॥ ೩ ॥

* * * * *

ರಾಗ : ಶುದ್ಧ ಧನ್ಯಾಸಿ ತಾಳ : ಆದಿತಾಳ

## (ವರ-ವಧುವಿಗೆ)

ಬಾಬಾ ಉರುಟಣೆಗೆ । ಪ್ರಿಯಕರಳೆ ।
ಬಾಬಾ ಉರುಟಣೆಗೆ ॥ ॥ ಪ ॥
ಬಾಬಾ ಶುಭಕರಿಯೇ । ಸುಪೀಠಕೆ ।
ಬಾಬಾ ಪ್ರಿಯತಮಳೇ ।
ಬಾಬಾ ಹೃದಯದಿ ಚಂದ್ರ ಚಕೋರಿಯೆ ।
ಬಾಬಾ ಉರುಟಣೆಗೆ ॥ ॥ ಅ.ಪ ॥

ಚಿತ್ತಜಮುಖಿ ತವ । ಕದಪುಗಳಿಗೆನಾ ।
ಅರಿಶಿನ ಹಚ್ಚುವೆನು । ಸುಮಂಗಲ ।
ಅರಿಶಿನ ಹಚ್ಚುವೆನು ॥
ಉತ್ತಮೆ ಸುಮನಸಗಾತ್ರೆ । ಸುಪಾಲಕೆ ।
ಇಡುವೆನು ಕುಂಕುಮವ । ಸುರಾಗದಿಂ ।
ದಿಡುವೆನು । ಕುಂಕುಮವ ॥ ॥ ೧ ॥

ಪದ್ಮಗಂಧಿ ಸಂಪತ್ಪ್ರದೆ ಪದ್ಮಿನಿ ।
ಗಂಧವ ಪೂಸುವೆನು ।
ಪರಿಮಳದ ಗಂಧವ ಪೂಸುವೆನು ॥
ಪದ್ಮಿಯೆ ಕಂಠವನೀಡೇ-ರತುನದ ।
ಮಾಲೆಗಳ್ಹಾಕುವೆನು ।
ಸುಮಂಗಳ ಹಾರವನ್ಹಾಕುವೆನು ॥ ॥ ೨ ॥

ಬಣ್ಣದಡಿಕೆಪುಡಿ ಕುಡಿ ಚಿಗುರೆಲೆಯೊಡ ।
ಮೃದುಸುಣ್ಣವ ಬೆರೆಸೀ ।
ಪರಿಕರವ ತಾರತಮ್ಯದೊಳಿರಿಸೀ ॥
ಸನ್ನುತಗುಣ ಶ್ರೀನಿವಾಸನು ಪಿಡಿದಿಹ ।
ತಾಂಬೂಲವಕೊಳ್ಳೇ ।
ಮನೋಹರೆ ಬಿಂಬಾಧರೆ ಕೊಳ್ಳೇ ॥ ॥ ೩ ॥

* * * * *

ರಾಗ : (ಮಿಶ್ರಭೂಪ್) ಮೋಹನ ತಾಳ : ಆದಿತಾಳ

ಉರುಟಣೆಗೈಯ್ಯುವೆ । ಪ್ರಿಯಕರನೇ ।
ಸುದತಿಯರೆಲ್ಲರ ಸನುಮತದೀ ।
ಶುಭದಿನದೀ ನಾ ಮುದದೀ ॥ ॥ ಪ ॥

ಸುಂದರತರ ಘನ । ಕಪೋಲ ದ್ವಂದ್ವಕೆ ।
ಕುಂದದೆ ಹಚ್ಚುವೆನರಿಶಿನವಾ-
ಶುಭಕೊಡುವಾ ಮುದವೀವ ॥ ॥ ೧ ॥

ಕುಂಕುಮ ಹಚ್ಚುವೆ ಶುಭವದನಾ ।
ಗಂಧವ ಪೂಸುವೆ ಸುಮಸದನಾ ।
ಶಿರಿರಮಣಾ-ಬಿಡು ಮೌನ ॥
ಜಾಜೀಮಲ್ಲಿಗೆ ಹಾರವತಂದು ।
ಭೋಗೀಶಯನಗೆ ಅರ್ಪಿಸಿ ಇಂದು ।
ರಾಗ-ಭೋಗವನೆಲ್ಲವ ಬಯಸಿ ।
ಬಾಗುತೆ ವೀಳ್ಯವ ನೀಡುವೆನೈ ।
ಬೇಡುವೆನೈ ಪಾಡುವೆನೈ ॥ ॥ ೨ ॥

ನಮಿಸುವೆ ಪ್ರೇಮದಿ ಹೃದಯೇಶಾ ।
ಪೊರೆಯಲಿ ಎಮ್ಮನು ಶ್ರೀನಿವಾಸ ।
ಸುವಿಲಾಸಾ ಮೃದುಹಾಸಾ ॥ ॥ ೩ ॥

* * * * *

## ॥ ಭೂಮದ-ಹಾಡು ॥

ರಾಗ-ಯಮುನಾ ಕಲ್ಯಾಣಿ (ಮಧ್ಯಮ ಶೃತಿಯಲ್ಲಿ) ತಾಳ : ಆದಿತಾಳ

ಭೂ-ಮಾ-ಇಡಲು ಬಾರೇ । ಧರಣಿದೇವಿ ।
ಭೂಮಾ ಇಡಲು ಬಾ ರೇ ॥ ॥ ಪ ॥

ನಂದನಕಂದಗೋ । ವಿಂದನ ಎಡೆಗೆ ನೀ ॥ ॥ ಅ.ಪ. ॥

ಉಪ್ಪು ಉಪ್ಪಿನಕಾಯಿ । ಹಪ್ಪಳ, ಸೂಪಗಳ್ ।
ಒಪ್ಪದಿಂ ವ್ಯಂಜನ ವಸ್ತುಗಳ್ಪಡಿಸುತಾ ॥ ॥ ೧ ॥

ಮಂಡಿಗೆ ಮೊದಲಾದ । ವಿಧವಿಧ ಭಕ್ಷ್ಯಗಳ್ ।
ತಂಡತಂಡದಿ ತಂದು । ಪಾಂಡವ ಪ್ರಿಯನಿಗೆ ॥ ೨ ॥

ಅನ್ನ ಪರಮಾನ್ನ । ಶ್ಯಾಲ್ಯಾನ್ನ ಚಿತ್ರಾನ್ನವ ।
ಘನ್ನ ಮೂರುತಿ ಶ್ರೀ । ಕೃಷ್ಣನ ಎಡೆಗೆ ನೀ ॥ ॥ ೩ ॥

ಕನಕಭೂಷಣೆ ದಿವ್ಯ । ಕನಕಾಂಬರನಿಗೆ ।
ಕನಕ ಕಲಶದಲ್ಲಿ । ಕ್ಷೀರಾದಿಗಳಿಟ್ಟು ॥ ॥ ೪ ॥

ಜಾನಕಿಪತಿ ಶ್ರೀ । ರಾಮಚಂದ್ರನೇ ।
ಶ್ರೀನಿವಾಸನೆಂದು । ಪರಮಾ ಭಕುತಿಯಿಂದ ॥ ॥ ೫ ॥

* * * * *

## ॥ ದಂಪತಿಗಳಿಗೆ ಆಶೀರ್ವಾದ ಪದ ॥

ರಾಗ-ಅಭೇರಿ (ಭಿಂಪಲಾಸ್) ತಾಳ : ಝಂಪೆತಾಳ

ಸುಖದಿಂದ ಬಾಳಿರೀ । ದಂಪತಿಗಳೇ ॥ ॥ ಪ ॥
ಸುಖದಿ ದಿನಗಳ ಕಳೆದು । ಮುಖ ಕಮಲ ಬಾಡಿಸದೇ
॥ ಅ.ಪ. ॥

ಜೀವನದಿ ಸಿಹಿ ಇದೆ । ಜೀವನದಿ ಕಹಿ ಇದೆ ।
ಜೀವನದ ಸಿಹಿ ಕಹಿಯ । ಸವಿದು ಬಾಳೀ ॥
ಬೇವು ಬೆಲ್ಲವ ಸವಿದು । ಶುಭ ಯುಗಾದಿಯದಿನದಿ ।
ನಾವೆಲ್ಲ ಸಂತಸದೀ । ನಲಿಯುವುದನರಿತೂ..... ॥ ೧ ॥

ಹಿರಿಯರಾಶೀರ್ವಾದ । ಕವಚವಾಗಲಿ ನಿಮಗೆ ।
ಕರಿವರದನಂಪ್ರಿಯಾ । ವಲಿಮೆ ಇರಲೀ ॥
ಗುರುಗಳೆಲ್ಲರು ನಿಮ್ಮ । ಕರುಣೆಯಲಿ ಕಾಯಲೀ ।
ಸರುವರಲಿ ಮಾನ್ಯತೆಯು । ನಿಮಗೊದಗುತಿರಲೀ॥ ೨ ॥

ಕ್ಲೇಶಗಳ ತೊಲಗಿಸೀ । ಜಗದೀಶ ಪಾಲಿಸಲಿ ।
ನಾಶವಾಗದ ಭಾಗ್ಯ । ಪ್ರೀತಿ-ಕೊಡಲೀ ॥
ದಾಸರನು ಪೋಷಿಸುವ । ಶ್ರೀನಿವಾಸನು ನಿಮ್ಮ ।
ಆಶೆಗಳ ಪೂರೈಸಿ । ದೀರ್ಘಾಯು ಕೊಡಲೀ ॥ ೩ ॥

* * * * *

## ॥ ಯತಿವರ್ಯರ ಸ್ತುತಿ ಪದಗಳು ॥

### ॥ ಶ್ರೀ ಜಯತೀರ್ಥರು॥ (ಟೀಕಾಚಾರ್ಯರು)

ರಾಗ : ನಾಟ ತಾಳ : ಝಂಪೆ ತಾಳ

ಜಯತು । ಜಯತು । ಜಯತು ಜಯತು ।
ಜಯತು ಜಯತು.... ॥ ॥ ಪ ॥

ಜಯತು ಜಯತೀರ್ಥಾಖ್ಯ । ಮುನಿಯೋಗಿವರ್ಯ ।
ಜಯತು ಟೀಕಾಚಾರ್ಯ । ಗುರುರಾಜ ಪ್ರೀಯಾ ॥
ಜಯತು ಶ್ರೀಮನ್‌ಮಧ್ವ । ಮುನಿಕಾರ್ಯಧುರ್ಯ ।
ಜಯತು ಶ್ರೀರಘುನಾಥ । ಭಜಕಸುಪ್ರೀಯಾ...॥ ಅ.ಪ ॥

ಪುರುಹೂತ ಮಂತ್ರದಲಿ । ಕುಂತಿಯಲಿ ಜನಿಸೀ ।
ವರಚಾಪ ವಿದ್ಯೆಯಲಿ । ಮೊದಲಿಗನು ಎನಿಸೀ ॥
ಸುರಕಾರ್ಯ ನಿರ್ವಹಿಸೆ । ಅಸುರ ಕುಲದಹಿಸೀ ।
ತುರುಸೆರೆಯ ಬಿಡಿಸಿದೆಯೋ । ಕುರುಬಲವ ಜಯಿಸೀ...
॥ ೧ ॥

ಒಳಿತಾಗೆ ಗೀತಾರ್ಥ । ಹರಿ ಮುಖದಿಪಡೆದೇ ।
ಕೊಳಗುಳದಿ ಪಟುಭಟರ । ನೀ ಮುರಿದು ಮೆರೆದೇ ॥
ಕಲಿ ಭೀಮನನು ಸರಿಸಿ । ಧರ್ಮಜನ ಕಾಯ್ದೇ- ।
-ಇಳೆಯಭಾರವನಿಳಿಸೆ। ಹರಿಯೊಡನೆ ಮೆರೆದೇ.....॥ ೨॥

ನಂದಮುನಿಗ್ರಂಥ ಹೊರೆ । ಎತ್ತಾಗಿ ಜನಿಸೀ ।
ಮುಂದೆ ನೀ ಅವತರಿಸಿ । ಯತಿಯಾಗಿ ಯಜಿಸೀ ॥
ನಂದತೀರ್ಥರ ಕೃತಿಗೆ । ಟೀಕೆಗಳ ರಚಿಸೀ ।
ಕುಂದಿಸಿದೆ ಕುಮತಿಗಳ । ವರ ಸುಧೆಯ ಸೃಜಿಸೀ......
॥ ೩ ॥

ಕಾರುಣ್ಯ ಮೂರ್ತಿಗಳು । ತಂದೆ-ತಾಯಿಗಳು ।
ತಾರುಣ್ಯದಲಿ ಮೆರೆವ । ಮಡದಿಮಣಿ ದ್ವಯರೂ ॥
ತಾರುಣ್ಯ ಭರತನುವು । ಸೌಭಾಗ್ಯನಿಲಯ..... ।
ಇರುತಿರಲು ದೀಕ್ಷರಿಸಿ। ಮಾಧ್ವ-ಯತಿಯಾದೀ.....॥ ೪ ॥

ಯೋಗೀಂದ್ರ ಸುರನಾಥ । ಶೇಷ ಆವೇಶಾ ।
ಕಾಗಿಣೇತಟದೇಶ । ಮಳಖೇಡ ವಾಸಾ ॥
ಬಾಗಿ ಬೇಡುವೆ ಜೀಯ । ಕೊಡು ಎಮಗೆ ಲೇಸಾ ।
ತಾಗಿಸಲು ತವಕರುಣೆ । ಪೊರೆವ-ಶ್ರೀನಿವಾಸಾ....॥ ೫ ॥

* * * * *

## ॥ ಶ್ರೀ ರಘೋತ್ತಮತೀರ್ಥರು ॥

(ಧಾಟೀ - "ಪಾಲಯಾಚ್ಯುತ ಪಾಲಾಯಾಜಿತ
ಪಾಲಯಾ ಕಮಲಾಲಯಾ" ಎಂಬಂತೆ)

ರಾಗ : ಆನಂದ ಭೈರವಿ (ಮಧ್ಯ ಶೃತಿಯಲ್ಲಿ) ತಾಳ:ತ್ರಿಪುಟ-ತಾಳ

ನಿರುತಭಜಿಸಿರೋ ಜಗದಿಮೆರೆಯುವ ।
ವರಘೋತ್ತಮತೀರ್ಥರಾ ॥
ಹರುಷದಲಿ ಮುದವೀವ ರಘುಪತಿ ।
ಮೋದತೀರ್ಥರ ಭಜಕರಾ ॥ ॥ ಪ ॥

ಕಾವನ್ನೈಯ್ಯದ ನಿರುತಸನ್ನಿಧಿ ।
ವಾಯುದೇವನ ಕರುಣದೀ ॥

ಕಾವುದೆಮ್ಮನು ಅಘವನೋಡಿಸಿ ।
ನೋವ ಕಳೆವುದು ತ್ವರಿತದೀ ॥ ॥ ೧ ॥

ಇವರ ಬೃಂದಾವನದ ಸೇವೆಯ ।
ಫಲವ ಬಣ್ಣಿಸಲಾಪೆನೇ ॥
ಕೋವಿದರು ತಾವರಿಯೆ ಎಂಬೊರೊ ।
ಇವರ ಮಹಿಮೆಯ ಅತಿಶಯ ॥ ॥ ೨ ॥

ಹೊಕ್ಕು ರಾತ್ರಿಯ ರಣದಿ ಕುರುಬಲ ।
ಹೆಕ್ಕಿ ಮುಕ್ಕಿದ-ಕುಕ್ಕಿದಾ ॥
ಕಕ್ಕುಲಾತಿಯ ಬಿಟ್ಟು ರವಿಸುತ ।
ಶಕ್ತಿ ಬಾಣದಲಿಕ್ಕಿದಾ ॥ ॥ ೩ ॥

ರಕ್ಕಸಾಗ್ರಣಿ ತನುವ ಬಿಡುತಲಿ ।
ಕಕ್ಕ ಅರ್ಜುನನುಳಿಸಿದಾ ॥
ತಕ್ಕ ಮಗನೆಂದೆನಿಸಿ ಭೀಮಗೆ ।
ಭೀಮಕೃಷ್ಣರನೊಲಿಸಿದಾ ॥ ॥ ೪ ॥

ಭೀಮ ಜನಿಸಿರೆ ಮಧ್ವರೂಪದಿ ।
ತಾಮಸಾಗ್ರಣಿ ಯುಗದಲೀ ॥
ತಾಮಸಿಲ್ಲದೆ ಜನಿಸಿ ಬಂದನು ।
ಮಧ್ವ ಸೇವೆಗೆ ದ್ವಿಜರಲೀ.... ॥ ॥ ೫ ॥

ಕಾಮಿಸುತೆ ಸನ್ಯಾಸ ಶ್ರೀರಘು ।
ವರ್ಯರಿಂದಲಿ ಪಡೆದರು ॥
ಶ್ರೀರಘೋತ್ತಮರೆನಿಸಿ ಜಗದಲಿ ।
ಕಾಮಿತಾರ್ಥವ ಪಡೆದರು ॥ ॥ ೬ ॥

ತೆರೆದುತೋರಲು ಮಧ್ವ ಭಾಷ್ಯದ ।
ಗುಹ್ಯ ಭಾವವ ಸುರಮಣಿ ॥

ಹರುಷ ಹೆಚ್ಚಲು ಪ್ರಾಜ್ಞರೆಂದರು ।
ಭಾವಬೋಧರು ಗುಣಮಣಿ ॥ ॥ ೭ ॥

ಮೆರೆವ ಪಂಚಾರಣ್ಯ ದೇಶದಿ ।
ದುರಿತನಾಶೆ ಪಿನಾಕಿನೀ ॥
-ಹರಿಯುತಿರೆ ತತ್ತೀರ ದೇಶದಿ ।
ವಲಿದು-ನಿಂದನು ಸನ್ಮುನೀ ॥ ॥ ೮

ಸಾಕಿ ಸಲಹುವ ಪಿತನ ತೆರದಲಿ ।
ವಾಕುಲಾಲಿಪ ಭಕುತರಾ ॥
ನೂಕಿಬಿಸುಡುವ ಪಾಪಕೋಟಿಯ ।
ಜೋಕೆ ಮಾಡುವ ಭೃತ್ಯರಾ ॥ ॥

ಲೋಕವಂದ್ಯರಮಾಡಿ ಮೆರಸುವ ।
ಸಂದಶಿಷ್ಯ-ಪ್ರಶಿಷ್ಯರಾ ॥
ಶೋಕಮೋಹವ ತ್ಯಜನೆ ಮಾಡಿಸಿ ।
ಹರಿಯ ತೋರುವ ಗುರುವರ ॥ ॥ ೧೦ ॥

ಭೂತಪ್ರೇತ ಪಿಶಾಚಚೇಷ್ಟೆಗಳಿವರ ।
ಭೀತಿಯೋಳಳಿವವು ॥
ಆತುಕೊಂಡಿಹ ರೋಗ ರುಜಿನಗಳಿವರ ।
ಕರುಣೆಲಿ ಉಳಿಯವು ॥ ॥ ೧೧ ॥

ಕೂತುಜಪಿಸಲು ಮಂತ್ರಸಿದ್ಧಿಗಳಿವರ ।
ಸನಿಹದಿ ದೊರೆವವು ॥
-ಮಾತು ಮನ್ನಿಸಿ ನಡೆವಸುಜನರ ।
ಮತಿಗೆ ಮಂಗಳ ಈವವು ॥ ॥ ೧೨ ।

ದೇವನಿರಖುತಿ ಆ ಘಟೋತ್ಕಚ ।
ಶ್ರೀರಘೋತ್ತಮನೆಂಬರೋ ॥

ಭಾವತಿಳಿಯದೆ-ಕೆಲರು ನಂಬದೆ ।
ದೇವತಾಂಶರು ಎಂಬರೋ ॥ ॥ ೧೩ ॥

ಭಾವುಕರು ಏನಾದರೆನ್ನಲಿ ।
ಮೂಲ ರಘುಪತಿ ಭಜಕರು ॥
ತಾವು ಎಂಬುದ ತೋರಿ ಭಜಕರ ।
ಕಾಮಿತಾರ್ಥವ ಸಲಿಪರು ॥ ॥ ೧೪ ॥

ನಿತ್ಯಜಯಕರ ಇವರ ಸೇವೆಯು ।
ಸತ್ಯ ನಿಜಫಲದಾತನು ॥
ಸತ್ಯಮೂರುತಿ ಶ್ರೀನಿವಾಸನು ।
ಇವರ ನಂಬಿರೆ ಪೊರೆವನು ॥ ॥ ೧೫ ॥

* * * * *

## ॥ ಶ್ರೀ ರಾಘವೇಂದ್ರರ ಸ್ತುತಿ ಪದ ॥

ರಾಗ : ಬಿಲಹರಿ ತಾಳ : ಆದಿತಾಳ

ಮಂತ್ರಾಲಯ ಪ್ರಭುವೇ । ಮದ್ಗುರುವೇ ।
ಮಂತ್ರಾಲಯ ಪ್ರಭುವೇ । ಸದ್ಗುರುವೇ ॥ ಪ ॥

ತಂತ್ರಸಾರದಿಂ । ಮೂಲ ರಾಮನ ಪೂಜೆ ।
ಮಂತ್ರ ಜಪದಿ ಪೂ । ತಾತ್ಮರೆಂದೆನಿಸಿದಾ ॥ ಅ.ಪ ॥

ನಿಂದು ವೃಂದಾವನದಿ । ತುಂಗಾ ತಟದಲಿ ।
ಬಂದ ಜನರ ಕ್ಲೇಶ । ತೊಲಗಿಸಿ ನಲಿಸೀ ॥
ಸಂದ ಪುಣ್ಯವನೆಲ್ಲಾ । ಆಶ್ರಿತ ಜನಕಿತ್ತು ।
ವಂದಿಪರಿಗೆ ಸುರ । ಧೇನುವೆಂದೆನಿಸಿದಾ ॥ ೧ ॥

ರೋಗ ರುಜಿನಗಳ । ಭವದ ಪೀಡೆಗಳ ।
ನೀಗದ ರುಣಗಳ । ಕೊರತೆಗಳಾ ॥

ಯೋಗಿ ನೀ ಪರಿಹರಿಸಿ । ಭಕುತ ಜನಕೆ ಸುಖ ।
ಭೋಗ ಶಾಂತಿಯನಿತ್ತು । ಮುದದಿ ಪೊರೆವ ಗುರೋ
॥ ೨ ॥

ಶ್ರೀನಿವಾಸನಾ । ವರಪುತ್ರ ನೀನಾದಿ ।
ಶ್ರೀನಿವಾಸನ ಪದ । ಭಜಿಸಿ ಪೂಜಿಸಿದೀ ॥
ಶ್ರೀನಿವಾಸ ಪ್ರಾ । ಣೇಶರನೊಲಿಸಿದಿ ।
ಶ್ರೀನಿವಾಸನ ದಯದಿ । ಗುರು ಸಾರ್ವಭೌಮನಾದೀ
॥ ೩ ॥

* * * * *

## ॥ ಶ್ರೀ ರಾಘವೇಂದ್ರರು ॥

ರಾಗ : ಮಿಶ್ರಪೀಲು (ಭಜನ್ ಕ್ರಮ) ತಾಳ : ಆದಿತಾಳ

ಜಯಜಯ ಶ್ರೀರಾಘವೇಂದ್ರ । ಸ್ವಾಮೀ....... ।
ಜಯಜಯ ಶ್ರೀರಾಘವೇಂದ್ರ ॥ ॥ ಪ ॥
ಜಯಜಯ ಸದ್ಗುಣ। ಸಾಂದ್ರ। ಯತೀಂದ್ರಾ.. ॥ ಅ.ಪ ॥

ಜಯ ಅಥಣೀ ಬೃಂದಾವನ ಮಂದಿರ ।
ಜಯಕರ ಧೃತಮಣಿಹಾರಾ... । ಧೀರಾ ।
ಜಯಕರ ಧೃತಮಣಿಹಾರಾ... ॥
ಜಯಶಿರಿಮಧ್ವಸುಶಾಸ್ತ್ರ ವಿಚಾರಾ ।
ಜಯವೀಯೋ ನಿಜ । ಭಕ್ತರುದ್ಧಾರಾ... ॥ ೧ ॥

ಭಜಕರಪಾವನ । ಸುರತರುವೇ ನಿನ್ನ ।
ಭಜಿಸುವೆ ಕರುಣದಿ ನೋಡೋ । ನೋಡೋ ।
ಭಜಿಸುವೆ ಕರುಣದಿ ನೋಡೋ ॥
ತ್ಯಜನೆಯ ಮಾಡಿಸು । ದುರಿತ ಸಮೂಹವ ।

ದಾಸರೊಡೆಯ ಶ್ರೀನಿವಾಸನ ನಂಬಿಹ ।
ದಾಸರ ಪೋಷಿಸಬಂದೇ । ತಂದೇ- ।
ದಾಸರ ಪೋಷಿಸಬಂದೇ ॥
ದಾಸನೆನಿಪ ಆ । ಭೀಮದಾಸನಾ ।
ಆಶೆಯ ಸಲಿಸಲು । ಅಥಣಿಯೋಳ್ ನಿಂದೇ.... ॥ ೩ ॥

* * * * *

## ॥ ಶ್ರೀ ಧೀರೇಂದ್ರತೀರ್ಥರು ॥

ರಾಗ : ಯಮುನಾಕಲ್ಯಾಣಿ (ಹೊಸ ರಿತ್ತಿ) ತಾಳ : ಝಂಪೆತಾಳ

ಧೀರೇಂದ್ರ ಯತಿವರರಿಗಾ... ನಮಿಸುವೆ ॥ ॥ ಪ ॥
ಶ್ರೀರಾಮಪದಯುಗ್ಮ । ಭಕುತಿಯಲಿ ಅರ್ಚಿಸಿದಾ......
॥ ಅ.ಪ ॥

ಗುರುಮಧ್ವಮುನಿಶಾಸ್ತ್ರ । ಅರಿತು ಸದ್‌ಗ್ರಂಥಗಳ ।
ವಿರಚಿಸುತೆ ಸಂಚರಿಸಿ । ದೇಶದೇಶಗಳಾ ॥
ಉರುಗರ್ವದಲಿ ಮೆರೆವ । ದುರ್ವಾದಿಗಳ ಮುರಿದು ।
ಜರಿದು ಭವಭೋಗಗಳ । ಯತಿ ಪಂಗ್ತಿಯಲಿ ಮೆರೆದ
॥ ೧ ॥

ಕ್ಷಿತಿಯೊಳಗೆ ಯತಿ । ರಾಘವೇಂದ್ರರಿಂ ರಾಜಿಸಿದ ।
ಅತಿಶಯದ ಫಲವೀವ । ಪೀಠದಲಿ ಕುಳಿತು ॥
ಗತಿ ತೋರಿ ದೀನರಿಗೆ । ಹಿತಕೋರಿ ಸುಜನರಿಗೆ ।
ಕ್ಷಿತಿಪಾಲರಂದದಲಿ । ಭುವಿಯೊಳಗೆ ಮೆರೆದಾ ॥ ೨ ॥

ಮುದ್ದು ವೃಂದಾವನದಿ । ಇದ್ದು ಹೊಸರಿತ್ತಿಯಲಿ ।
ವೃದ್ಧಿಗೈಸುತೆ ಮಹಿಮೆ । ದಿನದಿನದಿ ಜಗದೀ ॥
ಶ್ರದ್ಧೆಯಿಂ ಸೇವಿಪರ । ವಿಘ್ನಗಳ ಕಳೆದು ।
ಮಧ್ವೇಶ ಶ್ರೀನಿವಾಸ । ನಂಘ್ರಿ ಬಿಡದೆಲೆ ಭಜಿಪ ॥ ೩ ॥

* * * * *

## ॥ ಶ್ರೀ ಸತ್ಯಬೋಧರು ॥

(ಸವಣೂರು-ಬೃಂದಾವನ ಸನ್ನಿಧಿ)

ರಾಗ : ಬಾಗೇಶ್ವರಿ ತಾಳ : ಝುಂಪೆತಾಳ

ನತಿಸಿಬೇಡುವೆನಯ್ಯ । ಸತ್ಯಬೋಧಾರ್ಯಾ.... ॥ ॥ ಪ ॥
ಕೃತಿರಮಣನಂಘ್ರಿಯಲಿ । ಮನವನನುಗೊಳಿಸೈಯ್ಯಾ
॥ ಅ.ಪ ॥

ಮೋದತೀರ್ಥರ ಮತದಿ । ಸಾರತತ್ವವನರಿತು ।
-ಸದಮಲಾಭಕುತಿಯಲಿ । ಸಂಸೇವಿಸೀ ॥
ಮದಿತಜನ ತಿಮಿರಕ್ಕೆ । ಉದಿತ ಭಾಸ್ಕರನೆನಿಸಿ ।
ಮೇದಿನೀ ಸುರಗಣದಿ । ಮೆರೆದ ಯತಿವರ್ಯಾ ॥ ೧ ॥

ನಿಮ್ಮ ಮಹಿಮೆಯನೆಂತು । ಬಣ್ಣಿಪೆನೋ ಮುನಿವರ್ಯ ।
ನಿಮ್ಮ ಪಾಲಿಗೆ ಗರಳ । ಅಮೃತವಹುದೂ... ॥
ನಿಮ್ಮ ಕೆಣಕಿದ ಜನರ । ನಿಲಿಸಿ ನಡುರಾತ್ರಿಯಲಿ ।
ನಿರ್ಮಲದ ಆಗಸದಿ । ತರಣಿಯನುತೋರ್ದೇ...॥ ೨ ॥

ಜಪ-ತಪ-ಸಂಧ್ಯಾದಿ । ವಿಹಿತ ಕರ್ಮವ ತ್ಯಜಿಸಿ ।
ಗುಪಿತದಲಿ ದುರ್ವಿಷಯ । ಅಭಿಲಾಷಿಸೀ ॥
ಸುಪಥಗಾಮಿಗಳನ್ನು । ಒಮ್ಮನದಿ ಸೇವಿಸದೇ ।
ವಿಪಿನಸೃತಿಯೊಳು ಸಿಲುಕಿ। ಬಳಲಿ ಬಂದೆನೋ ಗುರುವೇ
॥ ೩ ॥

ಶಿರಿವಾಯುಮತಪೊಂದಿ । ಪಿರಿದೆನಿಪ ಧರುಮಗಳ ।
ಅರಿಯದೆಲೆ ನಿಂದಿಸುತ । ದೋಷಿಯಾದೇ... ॥
ಪರಿಪರಿಯ ಕಷ್ಟಗಳ । ಬಂಧನದಿ ನಾ ಸಿಲುಕಿ ।
ಪರಿಹಾರಕರು ನೀವೇ । ಎಂದು ಬಂದೆನೋ ಗುರುವೇ
॥ ೪ ॥

ಬಡವನಾ ಮೊರೆ ಕೇಳಿ । ಬಿಡದೆ ರಕ್ಷಿಸು ಪ್ರಭುವೇ ।
ನಡೆಸು ಭಕ್ತಿಯನಿತ್ತು । ಸುಜನರಲ್ಲೀ ॥
ಮಾಡಿಸೈ ಸತ್ಕರ್ಮ । ಸಾಧನಂಗಳ ನಿಂದು ।
ರೂಢಿಗಧಿಪತಿ । ಶ್ರೀನಿವಾಸ ಪದ ದಾಸಾ ॥ ೫ ॥

* * * * *

## ॥ ಶ್ರೀ ಸತ್ಯಧರ್ಮರು ॥
### (ಹೊಳೇ ಹೊನ್ನೂರು)

ರಾಗ : ಆರಭಿ ತಾಳ : ಆದಿತಾಳ

ಸತ್ಯಧರ್ಮತೀ । ರ್ಥರ ವೃಂದಾವನ ।
ಭೃತ್ಯರ ಮಾಳ್ಪದು । ಪಾವನಾ...... ॥ ಪ ॥
ಭದ್ರಾನದಿತಟ- । ಹೊಳೆಯ ಹೊನ್ನೂರಲಿ ।
ಭದ್ರಾಸನದಿವಿ । ರಾ... ಜಿಪಯಮಿವರ ॥ ಅ.ಪ ॥

ಗುರುಮಧ್ವ ಮುನಿಪೀಠ । ವರಿಸಿದ ಯತಿವರ್ಯ ।
ನಿರುತ ಮರುತ ಶಾಸ್ತ್ರ । ಪಠನಪಾಠನ ಧುರ್ಯ ॥
ಮೆರೆಯಲು ವೈದುಷ್ಯ । ಪ್ರಬಲರಿಗಾಶ್ಚರ್ಯ ।
ಧರೆಯೊಳದ್ಭುತ ತೋರ್ದ । ಸ...ತ್ಯವರರ ಶಿಷ್ಯ ॥ ೧ ॥

ನವರತ್ನ ಪೀಠದಲಿ । ನವರತ್ನಧಾಭರಣ ।
ನವವಿಧ ಭಕುತಿಯಲಿ । ಮೂಲರಾಮಾರ್ಚನಾ ॥
-ತವಕದಿಂದಲಿ ಬಿಡದೆ । ಮಾಡುತ ಧರೆಯೊಳಗೇ ।
ಅವನಿಪಾಲಕರಂತೆ । ಚರಿಸಿದ ಮಹಾಮಹಿಮ ॥ ೨ ॥

ಗಂಗಾಧರತಾ । ನಲಿಯುತ ಮುಂದಿರೇ ।
ಗಂಗೆ ಒಲಿದು । ಅಭಿಷೇಕ ಗೈದಿರೇ ॥
ಗಂಗೆ-ತುಂಗೆಯಪಿತ । ಶ್ರೀನಿವಾಸನ ಪ್ರಿಯ ।
ಹಿಂಗಿಸಿ ದುರಿತ, ಅ । ಭೀ...ಷ್ಟವ-ಸಲಿಸುವ ॥ ೩ ॥

* * * * *

## ॥ ಶ್ರೀ ಸತ್ಯಸಂಧರು ॥

ರಾಗ : ಮಾಂಡ್ (ಮಹಿಷಿ) ತಾಳ : ಆದಿತಾಳ

ಇವರೇ ನೀ ನೋಡೇ । ಭಕುತಿಯಲಿ ।
ಇವರ ಮಹಿಮೆ ಪಾಡೇ...। ಕೊಂಡಾಡೇ...... ।
ಇವರೇ ನೀನೋಡೇ ॥ ॥ ಪ ॥

ಮುದತೀರಥಮತ । ಪಯೋಬ್ಧಿ ಚಂದಿರ ।
ಪದುಮನಾಭಗತಿ । ಪ್ರಿಯರಾಗಿ ಮೆರೆವರು ॥ ಅ.ಪ ॥

ಪರಿಪರಿ ಕ್ಲೇಶಗಳಾ । ಭವದಲೀ ।
ಪಡೆದು ಸೇವಿಪ । ಜನರಾ॥
ಕರೆಕರೆ ಬಿಡಿಸುತ । ಹರುಷವ ಸುರಿಸುತ ।
ಧರೆಯೊಳು ದೀನತೆ । ಬಿಡಿಸೋ ಮಹಾತ್ಮರು ॥ ೧ ॥

ಗಂಗೆಬಾಗಿನವಂತೆ । ನೀಡಲು ।
ಗಂಗೆಗಿಳಿದರಂತೆ । ಅಂಗನೆರೂಪದಿ ॥
ಬಂದು ಸಂಭ್ರಮದಿ ।
ಕಂಕಣಕರದೊಳು । ಕೊಂಡು ಪೋದಳಂತೆ ॥ ೨ ॥

ಪೋದರಂತೆ ಗಯೆಗೇ । ಹಾಕಿರೇ ।
ಬೀಗಮುದ್ರೆ । ತಡೆಗೇ ॥
ಆದರದಿಂ ಕರ । ಮುಟ್ಟಿ ಸೆನೆಯೆ, ಕದ ।
ಬೀಗಮುರಿದು ಹರಿ । ಚರಣ ತೋರ್ದನಂತೆ ॥ ೩ ॥

ಪಂಡರಾಪುರವಂತೆ । ವಿಠ್ಠಲ ।
ವೃದ್ಧವಿಪ್ರನಂತೆ ॥
ಕೊಂಡದೇಹದಲಿ । ತಪ್ತ ಮುದ್ರೆಗಳ ।
ಕೊಂಡುದ ಇವರಿಗೆ । ತೋರಿ-ಮೆರೆದನಂತೆ ॥ ೪ ॥

ಹತ್ತು ವರುಷದಾಯು । ಆಶ್ರಮ ।
ಸತ್ಯಬೋಧರಿಂದೆ ॥

ನಿತ್ಯನೇಮದಲಿ । ಪೂರ್ಣಬೋಧರ ಮತ ।
ಸಾರುವ ಗ್ರಂಥಗಳ್ । ಸೃಜಿಸಿ ರಂಜಿಸಿದರ್ ॥ ೫ ॥

ಅಹಿಶಯನನ ಒಲಿಸೀ । ಜಗದಲಿ ।
ಸತ್ಯಸಂಧರೆನಿಸೀ ॥
ಮಹಿಷಿ ಕ್ಷೇತ್ರದಲಿ । ತುಂಗಾ ತಟದಲಿ ।
ವೃಂದಾವನದಿ ವಿ । ರಾಜಿಪ ಯತಿವರರ್ ॥ ೬ ॥

ಧರೆಯೊಳು ಛಲಬಿಡದಾ । ಕೊನೆಯಲಿ ।
ಯೋಗಮಾರ್ಗದಿ ನಡೆದಾ ॥
ಧರೆ-ಗೋ-ಸುರಪತಿ । ವರ ಶ್ರೀನಿವಾಸನ ।
ಕರುಣದಿ ಭವ, ಸೆರೆ । ದಾಂಟಿ ಮೆರೆದ ಯತಿ ॥ ೭ ॥

* * * * *

**॥ ಶ್ರೀ ಸತ್ಯಧ್ಯಾನರು ॥**

॥ ಪಂಡರಾಪುರ ಕ್ಷೇತ್ರ ॥

ರಾಗ : ಬೃಂದಾವನ ಸಾರಂಗ ತಾಳ : ಝಂಪೆತಾಳ

ನಿತ್ಯದಲಿ ನೀನೆನಸು । ಸತ್ಯಧ್ಯಾನರಾ ।
ಉತ್ತಮಾ ಮತಿಇತ್ತು । ಗತಿತೋರ್ವ ಯತಿವರರ ॥ ಪ ॥

ಚಿತ್ತದಲಿ ನೀನೆನಸು । ಸತ್ಯಧ್ಯಾನರ ಮಹಿಮೆ ।
ಮತ್ತೇಕೆ ಸಂದೇಹ । ಅಘ ಪೋಪುದೋ ಮರುಳೇ
॥ ಅ.ಪ ॥

ನಿತ್ಯಸುಖಕಾರಣರು । ಮುಕ್ತೇಶಸುತ ಪ್ರಿಯರು ।
ಸತ್ಯ-ಜ್ಞಾನಾಖ್ಯಫಲ । ಭುವಿಗಿತ್ತರು ॥
ವಿತ್ತಾನ್ನ ದಾನದಲಿ । ಸಮರಿಲ್ಲ ಎನಿಸಿಹರು ।
ಇತ್ತು ಸುಜ್ಞಾನವನು । ಯತಿ-ಬುಧರ ಬೆಳಸಿಹರು॥ ೧ ॥

ಪರಮಧ್ವ ಶಾಸ್ತ್ರದಲಿ । ಘನ ನಿಪುಣರೋ ಇವರು ।
ಪರವಾದಿ ನಿಗ್ರಹದಿ । ಯಶಭರಿತರು ॥
ಪರಮ ಪಾವನವಾಯ್ತು । ಇವರಿಂದ ಕ್ಷೇತ್ರ ತತಿ ।
ಪರಮಾತ್ಮನೊಲಿಸಿಹರು । ಸರುವ ರೀತಿಯಲೀ ॥ ೨ ॥

ಸರ್ವಜ್ಞ ಪೀಠದಲಿ । ಶ್ರೀರಾಮನರ್ಚಿಸುತ ।
ಸರ್ವಜ್ಞ ಮುನಿ ಮತದಿ । ಭುವಿ ಬೆಳಗುತಾ ॥
ಸರ್ವಜ್ಞಮುನಿವರದ । ಶ್ರೀನಿವಾಸನ ಪುರಕೇ ।
ಸರ್ವಜ್ಞಮುನಿಕಲ್ಪರೆನಿಸೀ । ಸಾರಿದರು... ॥ ೩ ॥

* * * * *

ರಾಗ : ಕೇತಾರಗೌಳ **॥ಶ್ರೀ ವಿದ್ಯಾಮಾನ್ಯರು॥** ತಾಳ : ರೂಪಕ
(ಭಂಡಾರಕೇರಿ ಮಠ)

ಕಂಡುಧನ್ಯರಾಗಿ ಬಾಳಿರೋ ।
ಕೋದಂಡಪಾಣಿಯ ವಲಿದ ಯತಿಗಳ॥ ॥ ಪ ॥
ಕಂಡುಧನ್ಯರಾಗಿ ಈ ಪದ । ಪುಂಡರೀಕದಲ್ಲಿ ಸತತ ।
ತೊಂಡಭಾವವನ್ನು ಬಿಡದೆ ।
ಭಂಡಾರಕೇರಿ ಮಠದ ಯತಿಗಳ ॥ ॥ ಅ.ಪ ॥

ಮಧ್ವಶಾಸ್ತ್ರದಲ್ಲಿ ನಿರುತ । ಬದ್ಧರಾಗಿ ಹರುಷದಿಂದ ।
ತಿದ್ದಿ ಶಿಷ್ಯತತಿಯ ಜ್ಞಾನ । ವಿಶುದ್ಧ ಮಾಡುತಾ ॥
ಕ್ಷುದ್ರವಾದಗಳನು ಜರಿದೂ । ಗೆದ್ದು ಐದೊಂದರಿಗಳನ್ನು ।
ಮಧ್ವಮುನಿಯ ವಲಿಮೆಪಡೆದು ।
ಶುದ್ಧರಾಗಿ ಚರಿಸುವವರಾ ॥ ॥ ೧ ॥

ತಂತ್ರಸಾರದಿಂದಲೀ । ಸ್ವತಂತ್ರ ಹರಿಯ ಪೂಜೆಗೈದು ।
ಮಂತ್ರಪೂತಜಲದಿ ಜನರ । ಭೀತಿ ಬಿಡಿಸುತಾ ॥
ಶ್ರಾಂತರನ್ನು ತತ್ವಸುಧೆಯ । ಪಾನಗೈಸಿ ನಲಿಸಿ ವಲಿಸೀ ।

ಶಾಂತ ಮುದ್ರೆಯಿಂದ ಪಾದಾ ।
ಕ್ರಾಂತರನ್ನು । ಪೊರೆವ ಯತಿಗಳ ॥ ॥ ೨ ॥

ದಾನಿ-ಮೌನಿ-ಸುಗುಣಿ ಸತ್ಯ । ಧ್ಯಾನರಿಂದ ಸಿದ್ಧಿ ಪಡೆದು।
ಮಾನ್ಯರಾಗಿ ದೀನಜನರ । ತಾಪ ಹರಿಸುತಾ ॥
ಜ್ಞಾನಿಗಮ್ಯ ಶ್ರೀನಿವಾಸನೇ ।
ಮಾನ್ಯ-ಮಾನದ-ಸ್ವಾಮಿ ಎಂಬ ।
ಮನ್ಯುರಹಿತರಾದ, ವಿದ್ಯಾ ।
ಮಾನ್ಯರೆಂಬ ಮಾಧ್ವಯತಿಗಳ ॥ ॥ ೩ ॥

**ಟಿಪ್ಪಣಿ** : [ಅಧುನಾ-ವಿದ್ಯಮಾನರಾಗಿ, "ವಿದ್ಯಾಮಾನ್ಯರೆನಿಸಿ" ನನ್ನ ವಿದ್ಯಾಗುರುಗಳಾದ ಪೂಜ್ಯರಾದ। (ಶ್ರೀಶ್ರೀ ॥ ಭಂಡಾಕೇರಿ-ಮಠದ ಶ್ರೀಗಳವರು (ಶ್ರೀ ವಿದ್ಯಾಮಾನ್ಯ ಶ್ರೀಪಾದಂಗಳವರು ಇವರ ಮೇಲಿನ ಹಾಡು॥ ಚೀಕಲ ಪರಿವಿ" ಇಲ್ಲಿ ಜ್ಞಾನಸತ್ರ ನಡೆದ-ಸಂದರ್ಭದಲ್ಲಿ ಶ್ರೀವಿಷ್ಣುತತ್ವವಿನಿರ್ಣಯ ಗ್ರಂಥದ-ಮಂಗಲಮಹೋತ್ಸವದಲ್ಲಿ ಗುರು ಕಾಣಿಕೆ ನೀಡುವ ಸುಸಂದರ್ಭದಲ್ಲಿ ನಾನು॥ ಮಾಡಿದ-ಪದ-ಇದು।]

* * * * *

## ॥ ಶ್ರೀ ನೃಸಿಂಹದೇವರಲ್ಲಿ ನಿವೇದನೆ ಪದ ॥

(ಮಧ್ಯಮ ಶೃತಿಯಲ್ಲಿ)

ರಾಗ : (ಮಿಶ್ರಪೀಲು) ತಾಳ : ಆದಿತಾಳ

ನಾರಸಿಂಹ ತವಪಾದಕೆರಗುವೆನು ।
ದಾರಿತೋರಿ ಕಾಯೋ ॥
ಧೀರ ಶೂರ ಗಂಭೀರನಾದ ।
ರಣಧೀರ್ರ ವೀರ ಕಾಯೋ ॥ ॥ ಪ ॥

ಕಾರುತಿಹುದು ಸಂಸಾರ ಸರ್ಪ ।
ವಿಷ ಏರದಂತೆ ಕಾಯೋ ॥

ಸೂರಿ ಜನರ ಆರಾಧ್ಯ ದೈವ ।
ಕೈಬಿಡದೆ ಎನ್ನ ಕಾಯೋ ॥ ॥ ೧ ॥

ವೆಗ್ಗಳವಾಗಿದೆ ದುರ್ಜನರುಪಟಳ ।
ಸಗ್ಗದಂತೆ ಕಾಯೋ ॥
ಜಗ್ಗಿಹೆ ತಗ್ಗಿಹೆ ಮುಗ್ಗಿಹೆ ಭವದೊಳು ।
ಸಗ್ಗದರಸ ಕಾಯೋ ॥ ॥ ೨ ॥

ಪುರಸೊತ್ತಿಲ್ಲದೆ ದುಡಿದು ದಣಿದೆನೋ ।
ಸಂಸಾರಕ್ಕೆ ಹರಿಯೇ ॥
ಅರವತ್ತರ ಈವಯದಲಿ ದುಡಿವುದು ।
ಸಾಕು ಎನ್ನ ಧೊರೆಯೇ ॥ ॥ ೩ ॥

ಅಜ್ಞಾನಕಳೆದು ಧನವಬಲವನೀಡಿ ।
ಸನ್ಮಾನವಿತ್ತಿ ಹರಿಯೇ ॥
ಅಜ್ಞಾನಿ ಜನರ ಪರಿವಾರದಲ್ಲಿ ।
ಸುಖವೆಲ್ಲಿ ಬಂತು? ಧೊರೆಯೇ ॥ ॥ ೪ ॥

ತನುಬಲಹೋಯಿತು । ಧನಬಲವಿಲ್ಲವು ।
ಹೀನನಾದೆ ಕಾಯೋ ॥
ಮಾನ ತೆಗೆಯೆ ಮುಂದಾಗಿಹರೆಲ್ಲರು ।
ಮಾನನಿಧಿಯೆ ಕಾಯೋ ॥ ॥ ೫ ॥

ಭಾಷೆ ಇಲ್ಲ ಸಂಭಾಷೆ ಇಲ್ಲ ।
ಬರಿವೇಷವೆಲ್ಲ ಹರಿಯೇ ॥
ಮೋಸವೆಲ್ಲ-ಸಂತೋಷವಿಲ್ಲ ।
ಕಲಿರಾಜ್ಯದಲ್ಲಿ ಮೆರೆಯೇ ॥ ॥ ೬ ॥

ಸತ್ಯಕೆ ಹಾನಿ । ಅಸತ್ಯಕೆ ವಿಜಯವು ।
ನಿತ್ಯದಲ್ಲಿ ಹರಿಯೇ ॥

ನೆತ್ತಿಯ ನೆತ್ತಿಸು-ಸತ್ಯದಿಬಾಳ್ವರ ।
ಶ್ರೀನಿವಾಸ ಧೊರೆಯೇ ॥ ॥ ೭ ॥

* * * * *

## ॥ ಶ್ರೀಕೃಷ್ಣಲೀಲಾಪ್ರಸಂಗ ॥ (ಸಾಂಗತ್ಯ)

॥ (ಯಶೋದೆ-ಕೃಷ್ಣನ-ಸಂವಾದ ರೂಪವಾದದ್ದು ) ॥

ರಾಗ : ದೇಸ್ ತಾಳ : ಆದಿತಾಳ

(ಅಥವಾ-ಉತ್ತಾರಾದಿ-ಸಾರಂಗ)

**ಪ್ರಸಂಗ-ಸನ್ನಿವೇಶ:**

[ಶ್ರೀಕೃಷ್ಣ-ತನ್ನ ಮಂದಿರದಲ್ಲಿ ತಾಯಿ ಇಲ್ಲದ ವೇಳೆಯಲ್ಲಿ , ಬೆಣ್ಣೆಯನ್ನು ಕದ್ದು ತಿನ್ನುತ್ತಿದ್ದ । ಆಕಸ್ಮಿಕವಾಗಿ ತಾಯಿ ಯಶೋದೆ, ಹೊರಗಿನಿಂದ, ಮನೆಯೊಳಗೆ ಬಂದಳು । ಕೃಷ್ಣ ಬೆಣ್ಣೆ ತಿನ್ನುತ್ತಿದ್ದುದನ್ನು, ಸದ್ದು ಮಾಡದೇ ಕದ್ದು ನೋಡಿದಳು; ಬಾಗಿಲ ಮರೆಯಿಂದ ॥ ತಾಯಿ ನೋಡಿದ್ದನ್ನು ಕೃಷ್ಣ ನೋಡಿದ । ತಿಳಿಯದವನಂತೆ ಬೆಣ್ಣೆಯನ್ನು ಚೆನ್ನಾಗಿ ಮೆದ್ದು , ಕೈಬಾಯಿ ವರೆಸಿಕೊಂಡು, ತಾಯಿಯನ್ನು ಹುಡುಕುವವನ ಹಾಗೆ, ಕೃಷ್ಣ , ನಟನೆ ಮಾಡುತ್ತಾ ಆ ಮನೆಯಿಂದ ಹೊರಗೆ ಬಂದ । ಯಶೋದೆಯೂ ಏನೂ ತಿಳಿಯದವಳಂತೆ, ಹೊರಗಿನಿಂದ ಒಳಗೆ ಬಂದವಳಂತೆ ನಟಿಸುತ್ತಾ ಮನೆಯ ಒಳಗೆ ಬಂದಳು, "ಕೃಷ್ಣ, "ನಿನ್ನನ್ನು ಹುಡುಕುತಿದ್ದೆ. ಎಲ್ಲಿಗೆ ಹೋಗಿದ್ದಿ?" ಎಂದು ಕೇಳಿದಳು ಅದಕ್ಕೆ-]

ಕೃಷ್ಣ : [ನಾನು ಮನೆಯಲ್ಲಿ ನಿನ್ನನ್ನು ಈವರೆಗೂ ಹುಡುಕಿದೆ ಇರಲಿಲ್ಲ, ನೀನೆಲ್ಲಿಗೆ ಹೋಗಿದ್ದೀ ಅಮ್ಮಾ? ಎಂದ ಕೃಷ್ಣ ॥

ಯಶೋದೆ : ಅದೆಲ್ಲಾ ಇರಲಿ; ನಿನ್ನನ್ನು ಈಗ, ಪ್ರಶ್ನೆ ಕೇಳುತ್ತೇನೆ; ಸರಿಯಾಗಿ ಉತ್ತರ ಕೊಡು ಎಂದಳು -ಸರಿ **ಕೊಡುತ್ತೇನೆ** ಕೇಳು ಎಂದ ಕೃಷ್ಣ ॥ ಇದರ ಮುಂದಿನದು ಪ್ರಶ್ನೋತ್ತರದ ವ್ಯವಹಾರ.]

॥ ಹಾಡು ॥

ಯಶೋದೆ : "ನವನೀತ ಕದ್ದಿಲ್ಲವೇ? ಪೇಳಿಲೋ ಕೃಷ್ಣ ।
ನವನೀತ ಮೆದ್ದಿಲ್ಲವೇ, ಮಂದಿರದಿ ।
ನವನೀತ ಕದ್ದಿಲ್ಲವೇ?" ॥

ಪದ-ಕೃಷ್ಣ : "ನವನೀತ ಕದ್ದಿಲ್ಲವೇ ಅಮ್ಮ ನಾನು ।
ನವನೀತ ಮೆದ್ದಿಲ್ಲವೇ । ಮಂದಿರದಿ ।
ನವನೀತ ಕದ್ದಿಲ್ಲವೇ"!! ॥

ಪದ-ಯಶೋದೆ : "ಮಂದಿಯ ಮಂದಿರ। ದೊಳು ಪಾಲ್ಬೆಣ್ಣೆಯ।
ಚೆಂದವೇ ಕದಿವುದು? । ಖ್ಯಾತಿಪೋಗದೇ?
ಕೃಷ್ಣ?" ॥

(ನವನೀತ-ಕದ್ದಿಲ್ಲವೇ? ಪೇಳಿಲೋ ಕೃಷ್ಣ.......ನವನೀತ ಮೆದ್ದಿಲ್ಲವೇ?)

ಪದ-ಕೃಷ್ಣ : "ಮಂದಿಯ ಮಾತಿದು ।
ಕೇಳಬಾರದು ತಾಯಿ ।
ಇಂದುವದನೆಯರ । ಮತಿಯೇ
ಚಂಚಲವಮ್ಮಾ ॥
ನವನೀತ ಕದ್ದಿಲ್ಲವೇ । ಅಮ್ಮ ನಾನು
ನವನೀತ ಮೆದ್ದಿಲ್ಲವೇ ।
ಮಂದಿರದ ನವನೀತ ಕದ್ದಿಲ್ಲವೇ" ॥

ಪದ-ಯಶೋದೆ: "ಕಳ್ಳನೆಂಬುವರಲ್ಲೋ । ಬಂದು
ದೂರುವರಲ್ಲೋ ।
ಸುಳ್ಳು ಹೇಳುವರೇನೋ? ।
ಗೊಲ್ಲಸತಿಯರೆಲ್ಲಾ ॥
ನವನೀತ ಕದ್ದಿಲ್ಲವೇ ಪೇಳೆಲೊ ಕೃಷ್ಣ ।
ನವನೀತ ಮೆದ್ದಿಲ್ಲವೇ?" ॥

ಪದ-ಕೃಷ್ಣ : "ಕಳ್ಳ ನಾನಾದೊಡೆ । ಗಲ್ಲ ಚುಂಬಿಪರೇನೇ?।
ನಲ್ಲೆಯಂದದಿ ತುಟಿಯ। ಕಚ್ಚಿ ನಲಿವರೇ? ।
ವಲ್ಲೆನೆಂದರೂ ಬಿಡದೆ। ಶೆಳೆದು ಕೊಂಡೆನ್ನನು।
ಸಲ್ಲದ ರೀತಿಯಲಿ। ಬಿಗಿದಪ್ಪಿ ಸುಖಿಪರೇ?"॥
ನವನೀತ ಕದ್ದಿಲ್ಲವೇ ॥

(ಸ್ವಗತ ವಿಷಯ) [ಯಶೋದೆ ಉತ್ತರಿಸಲಾಗದೇ । ಅಬ್ಬಾ!! ಎಂದು ಆಶ್ಚರ್ಯಚಕಿತ- ಭಾವವುಳ್ಳವಳಾಗಿ-ಕೃಷ್ಣನನ್ನು ಕುರಿತು:]

॥ ಹಾಡು ॥

ಪದ-ಯಶೋದೆ: ಹಿಂದಾದುದಾಗಲಿ । ಎನ್ನಮಂದಿರದಿ ।
ಇಂದುಕಂಡಿಹೆನಲ್ಲೋ ಕದಿವುದನು ।
ಮುಂದೇನಾಡುವೆ ಎನ್ನಲಿ ಕಳ್ಳನೆ?
ಸಂದೇಹ ಎನಗಿಲ್ಲಾ । ಮಂದಿಯ ಮಾತಲ್ಲ॥
ನವನೀತ ಕದ್ದಿಲ್ಲವೇ? ಮಂದಿರದಿ,
ನವನೀತ ಮೆದ್ದಿಲ್ಲವೇ
ಪೇಳೆಲೋ ಕೃಷ್ಣ ॥ ನವನೀತ ಕದ್ದಿಲ್ಲವೇ?

ಮಾತು-ಕೃಷ್ಣ : "[ನಿನ್ನ ದೃಷ್ಟಿಯಲ್ಲಿ ಕಳ್ಳ ನಾನು ಹೇಗೆ
ಆಗೇನೆ?] ಹೇಳು।

॥ ಹಾಡು ॥

ಪದ- : ಕಂದರು ಗೃಹದಲ್ಲಿ । ವಂಚಿಸಿ ತಿಂದರೂ ।
ಕುಂದು ಕಾಂಬರೆ । ಗೃಹದಿ ಮಾತೆಯರು ॥
ಮುಂದುಮಾಡಿ ತಮ್ಮ । ಕಂದರ ಸದ್ಗುಣ ।
ಮಂದಿಯೊಳಗೆ ಘನ । ಕೀರ್ತಿ ಬೆಳೆಸುವರೇ ॥

ಪದ- : ನವನೀತ ಕದ್ದಿಲ್ಲವೇ ಅಮ್ಮ ನಾನು ।
ನವನೀತ ಮೆದ್ದಿಲ್ಲವೇ ॥

(ಸ್ವಗತ)- [ಯಶೋದೆ ಉತ್ತರಿಸಲಾಗದೆ-ಕೋಪಕ್ಕೊಳಗಾಗಿ ಕೃಷ್ಣನಿಗೆ]

॥ ಪದ ॥

"ಹೊಗಳಿ ಹೊಗಳಿ ನೀ । ಮರುಳು ।
ಮಾಡಲಿ ಬ್ಯಾಡೋ ।
ಜಗವಂಚಕರಿಗೆ । ಗುರುವಾದೀ ॥
ಬಿಗಿಸಿ ಕಂಭಕೆ ಕಟ್ಟಿ । ಬಾಯಬಿಡಿಸುವೆನು ।
ನಗೆಗೀಡಾಗುವೆ ಊರಲಿ ॥ ಶ್ರೀಕೃಷ್ಣ ॥

ಪದ- ನವನೀತ ಕದ್ದಿಲ್ಲವೇ ಪೇಳೆಲೋ ಕೃಷ್ಣ?" ನವನೀತ ಮೆದ್ದಿಲ್ಲವೇ?

(ಸ್ವಗತ)- [ಕೃಷ್ಣ ತಾಯಿಯ ಬಳಿಗೆ ಬಂದ। ಮುದ್ದು ಮುಖದಲ್ಲಿ ಕೋಪ-ತಾಪ-ಪ್ರಕಟಿಸುತ್ತಾ ಯಶೋದೆಯ ಮುಖಕ್ಕೆ ಕೈ ಮಾಡಿ ಕೇಳಿದ]

॥ ಹಾಡು ॥

ಪದ-ಕೃಷ್ಣ : "ಒಡನೆ ನುಡಿದ, ಶ್ರೀ ಕೃಷ್ಣ ಯಶೋದೆಗೆ ।
ಹಡೆದ ತಾಯಿ-ಎದೆ । ನಿನಗಿಲ್ಲಾ!! ॥
**ಹಡೆದೆಯೋ? । ಪಡೆದೆಯೋ? ।**

**ದಿಟ ನುಡಿ, ನುಡಿಯೆಂದು ।**
ಒಡಲ ಮುಟ್ಟಿ ತಾಯ । ಕರ ಪಿಡಿದತ್ತನು" ॥

ಪದ- ನವನೀತ ಕದ್ದಿಲ್ಲವೇ-ಅಮ್ಮಾ ನಾನು । ನವನೀತ ಮೆದ್ದಿಲ್ಲವೇ ॥ [ಎಂದ] ॥

ಸ್ವಗತ- [ಈ ಮಾತು ಯಶೋದೆಗೆ "ನುಂಗಲಾರದ ತುತ್ತಾಯ್ತು" ಅವನಿಂದ ತಾನು "ಅಮ್ಮಾ" ಎಂದು ಕರೆಸಿಕೊಂಡು-ವ್ಯವಹರಿಸುವ ಸೌಭಾಗ್ಯ, ನನಗಿನ್ನು ಇಲ್ಲವಾಗುವುದೇನೋ ಎಂದು ಹೌಹಾರಿ, ಹೆದರಿದಳು -ಒಂದು ಸಣ್ಣ ಪ್ರಸಂಗ, ಮಹಾಹಾನಿ-ತರುವುದರ, ಅರಿವಾಯ್ತು । ಅದನ್ನು ಸರಿಪಡಿಸಲು ಅವಳ ಬುದ್ಧಿ ಸಿದ್ಧವಾಯ್ತು । ಕೋಪವು ಕನಿಕರದಲ್ಲಿ ಪರ್ಯವಸಾನ-ವಾಗಲು, ಯಶೋದೆ]

ಯಶೋದೆ:

ಪದ- ಸೂಸಿರೆ ಅಂತಃಕರಣವು ಹೃದಯದಿ ।
ಕೂಸಿನ ಬಿಗಿದಪ್ಪಿ । ಅಳುತಳುತಾ.. ॥
ಘಾಸಿ ಮಾಡಿದೆ ಕಂದ । ಸೈರಿಸು ಕೃಷ್ಣನೇ ।
ತೋಷಿಸು, ಮಮತೆಯ । ನುಡಿಗಳಲೀ । ಎನ್ನ,
-ತೋಷಿಸು-ಮಮತೆಯ ನುಡಿಗಳಲೀ ॥
ಜಾರಿದ ಮತಿಯಲಿ । ಮೀರಿದ ಮಾತಿದು ।
ಚೋರ ನೀನಲ್ಲವೋ । ಇದು-ಖರೆಯೋ.... ॥
ಚೋರತನವುಂಟೆ? । ನಿನ್ನ ಮಂದಿರದಿ ।
ಸೈರಿಸು, ಹೃದಯದ । ಭಾರ ತಗ್ಗಿಸು ಕಂದ ॥
ನವನೀತ ಕದ್ದಿಲ್ಲವೋ । ಕಂದ ನೀನು ।
ನವನೀತ ಮೆದ್ದಿಲ್ಲವೋ । ಮಂದಿರದಿ ।
ನವನೀತ ಕದ್ದಿಲ್ಲವೋ............... ॥

[ಎಂದು ಮುದ್ದಾಡಿದಳು-ತೆಗೆದಪ್ಪಿ-ಸಂತೈಸಿದಳು ಅತ್ತಳು]

[ಕೃಷ್ಣನು ತನ್ನ ಕೈಗಳಿಂದ ಅವಳ ಗಲ್ಲ ಮುಟ್ಟಿ । ಪುಟ್ಟ ಕೈಗಳಿಂದ ಅವಳ ಕಂಬನಿವರೆಸಿದ । ಗಲ್ಲವನ್ನು ಚುಂಬಿಸಿದ-ಸಂತೈಸುತ್ತಾ ಹೀಗೆ ಅಂದ "ಅಮ್ಮಾ ನೀನು ಸುಳ್ಳು ಹೇಳಿಲ್ಲ ॥ ನಿನಗೆ ನಾನೂ ಸುಳ್ಳು ಹೇಳ್ಲಿಲ್ಲ!!] ಹೇಗೆ? ಅಂದರೆ ಕೇಳು":-

(ಶ್ರೀಕೃಷ್ಣ ಯಶೋದೆಗೆ: ಹೇಳಿದ)

ಸತ್ಯವನರಿತಿಹೆ । ಸತ್ಯವಕೇಳಿಹೆ ।
ಸತ್ಯವನೋಡಿಹೆ । ನೀನಮ್ಮಾ ॥
ಸತ್ಯವ ಪೇಳು, ಎನೆ । ನಡುಗಿತು-ಎನ್ನೆದೆ ।
ಸತ್ಯವಾಕ್ಯಕೆ ನಾನು, "ಕಾಕು" ಬಳಸಿದೆನೆ ॥

["ಕಾಕು" ಪ್ರಯೋಗ, ಒಂದು ಅಲಂಕಾರ-ಕಾವ್ಯ ಶಾಸ್ತ್ರದಲ್ಲಿ. ಇದನ್ನು ಬಳಸಿದೆ. ಕಾಕು ಎಂದರೆ ಪ್ರಶ್ನೋತ್ತರವೆಂದು ಅರ್ಥ ಅಂದ.]

ಕೇಳು- [ನವನೀತ ಕದ್ದಿಲ್ಲವೇ? ಮೆದ್ದಿಲ್ಲವೇ? ಹೀಗಾಗಿ ಕದ್ದಿದ್ದೀನಿ ಮೆದ್ದಿದ್ದೀನಿ ಎಂದು ಅರ್ಥ ಬರುತ್ತದಮ್ಮಾ॥ ವಿಚಾರಮಾಡಿ ನೋಡು ಅಂದ ॥]

ಪದ-ಕೃಷ್ಣ ನವನೀತ ಕದ್ದಿಲ್ಲವೇ? ಅಮ್ಮ ನಾನು ।
ನವನೀತ ಮೆದ್ದಿಲ್ಲವೇ? ಮಂದಿರದಿ ।
ಕಣ್ಣಾರೆ ಕಂಡಿಲ್ಲವೇ? ಅಮ್ಮ ನೀನು ।
ಎನ್ನಾಣೆ ಪುಸಿಯಲ್ಲವೇ...... ॥

ಕದ್ದೆನು ಮೆದ್ದೆನು ಎಂಬುದನೊಪ್ಪಿರೆ ।
ಗುದ್ದಾಡಿದಿ ಬರಿ । ಮೋಹದಲಿ
ಶುದ್ಧ ನಾನೆಂದಿಗೂ । ಶ್ರೀನಿವಾಸನ ಆಣೆ ।
ಬುದ್ಧಿಲಿ ನೀ ತಿಳಿದು । ಎನ್ನೊಡನಾಡಮ್ಮಾ ॥

ಮಗನ ಮಾತು ಕೇಳಿ । ಕೃಷ್ಣನ ಬಿಗಿದಪ್ಪಿ ।
ಮೊಗದಲಿ ಮೊಗವಿಟು । ಮುದಿಸುತಾ ॥

ಸೊಗಸಿತೋ ಮನಸಿಗೆ । ನಿನ್ನಯ ಮತಿ ಕೃತಿ ।
ತೆಗೆಸಿತೋ ಕುಮತಿಯ। ಎನ್ನಲಿ, ನಿಜವೆಂದಳ್॥

ಮಂಗಳ ಕೃತಿಯಾಯಿತೋ । ನಿನ್ನಯ ಕೃತಿ ।
ಮಂಗಳಕರವೆನಿಸಿತೋ ॥ ಮಂಗಳ ಮೂರುತಿ ।
ಮುನ್ನಿನಂದದಿ ಎನ್ನ । ಕಂಗಳ ಮುಂದಾಡು ।
ತಾಯ್ತನದ ಸುಖ ನೀಡು ॥

ತಾಯಿ ಯಶೋದೆಯ । ಮಾತು ಕೇಳಿ ಕೃಷ್ಣ ।
ತಾಯಿಯಮೊಗವೆತ್ತಿ । ಮುದ್ದಿಸುತಾ ॥
ಮಾಯದ-ಮೋಹದ । ಮಮತೆಯ ಚಿಮ್ಮಿಸಿ ।
ತಾಯ್‌ತನದ ಸುಖ ನೀಡಿ। ಮಂಗಳಕರನಾದ ॥

ಗೋಕುಲಪತಿ ಶ್ರೀ । ಕೃಷ್ಣ ಯಶೋದೆಗೆ ।
ವ್ಯಾಕುಲಪಡಿಸಿದ । ಲೀಲೆಯಲೀ ।
ವ್ಯಾಕುಲ ಬಿಡಿಸಿದ । ಲೀಲೆಯಲೀ ॥
ಸಾಕೆನಿಸದು ಶ್ರೀನಿವಾಸನ ವೈಭವ ।
ವಾಗ್ದೇವಿಯ ಪತಿ ಮುಖ್ಯರಿಗೇ ।
ವಾಗ್ದೇವಿಯಪತಿ ಮುಖ್ಯರಿಗೇ.... ॥

ಜಯಮಂಗಳಂ ನಿತ್ಯ ಶುಭಮಂಗಳಂ ।
ಜಯಮಂಗಳಂ ಕೃಷ್ಣ । ಶುಭಮಂಗಳಂ ।
ಜಯ ಮಂಗಳಂ ಶಿರಿಗೆ । ಶುಭಮಂಗಳಂ ॥
ಶುಭಮಂಗಳಂ । ಶುಭ ಮಂಗಳಂ ।
ಶುಭಮಂಗಳಂ ॥

[ಹರಿಕಥಾ ವಿದ್ವಾನ್ ಸತ್ಕೀರ್ತನಾಲಂಕಾರ ಶಿವಮೊಗ್ಗಾ
ಶ್ರೀನಿವಾಸದಾಸಕೃತ ಯಶೋದಾ-ಕೃಷ್ಣ-ಸಂವಾದ ರೂಪಕ
ಸಾಂಗತ್ಯ (ಕವಿತಾ) (ಕವನ) ಸಂಪೂರ್ಣವಾಯ್ತು ] [ಇತಿ ಶಂ]

[ಅಸ್ಮದ್ಗುರ್ವಂತರ್ಗತ, ಶ್ರೀಭಾರತೀಶಹೃದ್ವನಜವರ್ತೀ
ಶ್ರೀಕೃಷ್ಣಾರ್ಪಣಮಸ್ತು ]॥ ಇತಿ. ಶಂ ॥

* * * * *

ರಾಗ : (ಆರಭಿ) (ದುರ್ಗಾ) ತಾಳ : ಆದಿತಾಳ

ಕರೆದರು ಪೂಮಳೆಗಳ । ಅಂಬರದೊಳು ।
ಸುರನಾರಿಯರತಿ । ಹರುಷದಲೀ ॥ ಪ ॥

ಪರಮವೈಷ್ಣವನ । ಭಕುತಿಗೆ ಸಿಲುಕಿದ ।
ಪರಮಪುರುಷನ । ಚೋದ್ಯವ ನೋಡೀ ॥ ಅ.ಪ. ॥

ನಿಗಮಕೆ ಸಿಲುಕದ । ಅಗಣಿತ ಗುಣಯುತ ।
ಜಗದಲಿ ಭಕುತರ । ವಶನಹನೋ ॥
ಮಿಗೆ ಹರುಷದಲಿ । ಬಂಧಿತನಾಗಿಹ ।
ಖಗವಾಹನನಾ । ಲೀಲೆಯ ನೋಡಿ ॥ ೧ ॥

ಕರುಣೆ ಎಂತುಟೋ । ಹರಿಗೆ ಶರಣರೊಳು ।
ನಿರುತ ಸೇವೆಯ ಕೊಂಬ । ನಗುಮೊಗದೀ ॥
ಶರಣಾಗತರ ಕೈ । ಬಿಡದೆಲೆ ಪೊರೆಯುವ ।
ಹರಿಯ ಮಹಿಮೆಗಳ । ಬಣ್ಣಿಪೆವೆಂತೆಂದು ॥ ೨ ॥

ವಾಸುದೇವ ತನ್ನ । ಪಾಡುತಲಿರ್ಪರ ।
ದೋಷವ ನೋಡದೇ । ಪಾಲಿಪನೋ ॥
ನಾಶರಹಿತ ಶ್ರೀನಿ । ವಾಸನ ಆಜ್ಞೆಯೊಳ್।
ವಾಸಿಪ ಜನರಘ । ದೂಡೀ ಪೊರೆವನೆಂದು ॥ ೩ ॥

* * * * *

**॥ ಮಯೂರಧ್ವಜ ತಾಮ್ರಧ್ವಜರ ಕಥೆಗೆ ಬೇಕಾದದ್ದು ॥**

(ಪ್ರಸಂಗ : ತಾಮ್ರಧ್ವಜ ಮಯೂರಧ್ವಜನಿಗೆ :
ಕೃಷ್ಣಾರ್ಜುನರನ್ನುಗೆಲಿದು
ಬಂಧಿಸಿ ವಿಜಯೋತ್ಸವದಿಂದ ಮನ-ತನು ಉಬ್ಬಿ ಬಂದಾಗ
ಹೇಳುವ ಮಾತು ಇದು)

ರಾಗ : ಮಾಂಡ್ ॥ ಆರ್ಯ ಧಾಟೀ ॥ (ಏಕತಾಳ) ಆದಿತಾಳ

ಮಗ : ನರನಲಿ ಸಂಗರವೆಸಗಿತು । ತಂದೆಯೇ ।
ನರಹರಿಯನು ನಾ । ಬಂಧಿಸಿದೇ ॥
ನರನೊಡಗೂಡಿದ । ಸೇನೆಯ ಸವರುತೆ ।
ನರ-ಹರಿಯನು ನಾ । ಬಂಧಿಸಿದೇ ॥ ॥ ೧ ॥

ತುರಗದ್ವಯದಿ ಐತಂದೆನು ತಂದೆಯೇ ।
ಹರುಷಿಸಿ ಹರಸುವುದೆಂದೆನಲೂ ॥
ಸುರಭೂರುಹ ಶ್ರೀನಿವಾಸನ ಕಿಂಕರ ।
ಉರುತರ ಕೋಪದಿ ತಾನುಡಿದಾ ॥ ॥ ೨ ॥

ತಂದೆ : ಗತಿಮತಿಹೀನನೆ । ಶ್ರೀಪತಿ ಎದುರಿಲಿ ।
ಹತವಾಯಿತು । ನಿನ್ನಯ ಪುಣ್ಯ ॥
ಪತಿಬಿಟ್ಟವರಿಗೆ । ಸಮನೀನಾಗಿಹೆ ।
ಕ್ರತುಪತಿ ಶ್ರೀನಿ । ವಾಸನ ತ್ಯಜಿಸೀ ॥ ॥ ೩ ॥

* * * * *

॥ ಪ್ರಸಂಗ : ಮಯೂರಧ್ವಜನಿಗೆ: ಶ್ರೀ ಕೃಷ್ಣಾರ್ಜುನರು-
ವಿಪ್ರವೇಷದಲ್ಲಿದ್ದು ಯಜ್ಞ ಶಾಲೆಗೆ ಬಂದಾಗ, ರಾಜನಿಗೆ
ಹೇಳಿದ್ದು ಹಾಡು॥

ರಾಗ : ಬೇಹಾಗ್ ತಾಳ : ಆದಿತಾಳ

ಬಂದೆವೋ ನರಪಾಲ । ಅರಸುತಲಿ ।
ಬಂದೆವೋ ನರಪಾಲ ॥ ॥ ಪ ॥

ಸಂದಿಹ ಪುರಜನ । ಸಂದಣಿಯೊಳು ನಿನ್ನ ।
ಕುಂದದ ಕೀರ್ತಿಯ । ಕೇಳುತ ಹಿಗ್ಗುತಾ ॥ ೧ ॥

ಇಂದಿನ ಎಮ್ಮಯ । ದುಗುಡವ ಹರಿಸಲು ।
ತಂದೆಯೇ ನಿನ್ನಯ । ಗೃಹದ ಬಾಗಿಲಿಗೇ ॥ ೨ ॥

ಸುಂದರನ ಕುವರನ । ಲಗ್ನಕೆ ನಿನ್ನಯ ।
ಮಂತ್ರಿ ಸಂಜಾತೆಯು । ಬೆಳೆದು ನಿಂದಿಹಳೆಂದು ॥ ೩ ॥

ಕಾನನದೊಳು ಎನ್ನ । ಕುವರನಂ ಕೇಸರೀ ।
ಕಾಣುತೆ ಪಿಡಿಯಲು । ಆಣೆ ಇಕ್ಕಿದೆನಯ್ಯಾ ॥ ೪ ॥

ಕೇಸರಿ ನಿನ್ನಯ । ದೇಹದೊಳರ್ಧವ ।
ಆಶಿಸಿ ಉಸುರಿತು । ಕೊಂಡು ಬರುವುದೆಂದು ॥ ೫ ॥

ಆರನುವಲ್ಲೆನು । ಎನ್ನಲು ಕೇಸರಿ ।
ದಾರಿಯ ಕಾಣದೇ । ಕಂದನ ಬದುಕಿಸೆ ॥ ೬ ॥

ಕಾವನು ಕುವರನಂ । ನರಪತಿ ಎನ್ನಲು ।
ಜೀವರೊಡೆಯ ಶ್ರೀನಿ । ವಾಸಾ ರಕ್ಷಕನೆಂದು ॥ ೭ ॥

* * * * *

॥ ಮಯೂರಧ್ವಜರ ಕಥೆಗೆ ಹಾಡು ॥
(ಪ್ರಸಂಗ : ಮಯೂರಧ್ವಜನಿಗೆ ಅವನ ಪತ್ನಿ
ಕುಮುದ್ವತೀ ದೇವಿ ಹೇಳಿದ್ದು)

ರಾಗ : ಅಠಾಣ    ತಾಳ : ತ್ರಿಪುಟ ತಾಳ

ವ್ಯಾಕುಲವಿದು ಏತಕೇ । ಹೇ ಕಾಂತನೇ ।
ಈ ಕಾಂತೆ ಇರುತಿರಲು ॥ ॥ ಪ ॥

ಅರ್ಧದೇಹವ ಬೇಡಿದಾ । ಕೇಸರೀ ಮಾತ ।
ಅರ್ಥಭಾವವ ಶೋಧಿಸ್ಯೆ ॥
ಅರ್ಧದೇಹವೇ ನಿಜ ಸತಿಯು । ಎಂದೆನಿಪಳು ।
ವ್ಯರ್ಥವಲ್ಲಿದು..... ಲಾಲಿಸ್ಯೆ.... ॥

ಪಾರ್ಥಸಾರಥಿ ಶ್ರೀನಿವಾಸನು ।
ಅರ್ಥಿಯಿಂ ಎನಗಿತ್ತ ದೇಹವು ।

ಸಾರ್ಥಕವು ತಾನಾಯ್ತು ಈಗಲೆ ।
ಕರ್ತಾ ನೀದ್ವಿಜಗಿತ್ತು ಮೋದಿಸು ॥

* * * * *

## (ಉತ್ತರಾದಿ ರಾಗ)

ರಾಗ : ಜಯ ಜಯವಂತಿ ತಾಳ : ತ್ರಿಪದಿ

॥ ಹಾಡು ॥ [ಕ್ರೂರ ಪತಿಯ ಬಗ್ಗೆ ಸತಿಯು ಹೇಳುವ ಪದ]

ಸಾಹಸವಿದು ನಾಥ..... । ದುರುಳರಾ ।
ಸಾಹಸವಿದು ನಾಥಾ... ॥ ॥ ಪ ॥

ಗತಿಯ ಕೆಡಿಸುವಾ । ಮತಿಯಲಿ ತನ್ನಯ ।
ಹಿತವ ಕೋರ್ವ ನಿಜ । ಸತಿಯಳ ಕೊಲುವುದು ॥ ೧ ॥

ತನುವ ಮಾರಿ ತಾ । ಬದುಕುವ-ನಾರಿಗೆ ।
ತನು-ಮನ-ಧನವಿತ್ತು । ನರಕಕ್ಕೆ-ಬೀಳ್ವುದು ॥ ೨ ॥

ಶರಣರ ಸುರಧೇನು । ಶ್ರೀನಿವಾಸನ, ಮರೆತು ।
ಕುರುಡರಾಗಿ ದುರ್ । ವಿಷಯದಿ ದಣಿವುದು ॥ ೩ ॥

* * * * *

## ॥ ಬರಗಾಲ ವರ್ಣನೆ ಪದ ॥

("ಭಕ್ತದಾಮಾಜೀ ಪಂಥ್"
ಈ ಕಥೆಗೆ ಉಪಯೋಗಿ ಈ ಹಾಡು)
(ಪ್ರಸಂಗ : ಪಂಡರಾಪುರದಲ್ಲಿ ಬರಗಾಲದ ಭವಣೆ ಇದ್ದಾಗ)

ರಾಗ : ಸಾರಂಗ ತಾಳ : ಝುಂಪೆತಾಳ

ಬರಗಾಲ ಕಾಲದಲಿ । ಪಂಡರಾಪುರ ಜನರು ।
ಪರಿವಾರವನು ತೊರೆದು। ಸಾರಿದರು ಯಮಪುರವ ॥ಪ॥

ಮಡದಿ ಮಕ್ಕಳನಿತ್ತು । ಒಡಲಿಗನ್ನವ ಕೇಳ್ವರ್ ।
ಸುಡುಗಾಡ ಸೇರಿದರು । ಕಡುಬಡವರಾದವರು ॥
ಬಡಿವಾರ ಗೈದವರು । ತುಡುಗರಾದರು ಆಗ ।
ಕಡೆಹಾಯಿಸೆಂದೆನುತ । ಬೇಡುವರು ದೈವಗಳ ॥ ೧ ।

ಹಿಟ್ಟು ಕಾಣದೆ ಕೆಲರು । ಹೊಟ್ಟೆಗಿಲ್ಲದೇ ಕೆಲರು ।
ಕೆಟ್ಟ ನೀರನು ಕುಡಿದು । ಕಂಗೆಟ್ಟು ಕೆಲಕೆಲರು ॥
ಸೃಷ್ಟಿಗೀಶನ ಹಳಿದು । ಭ್ರಷ್ಟರಾಗುತೆ ಕೆಲರು ।
ಕಷ್ಟಬ್ಯಾಡೆಂದೆನುತ । ಕಣ್ಮುಚ್ಚುತಿಹರು ॥ ೨ ॥

ಅನ್ನ ಕಾಣದ ಮುನ್ನ । ತಮ್ಮ ಪ್ರಾಣವ ನೆರೆವರ್ ।
ಚಿನ್ನಗಳಿಸಿದ ಜನರು । ಕಣ್ತುಂಬ ನೋಡುತಲಿ ॥
ಇನ್ನು ಗತಿಯಾರೆನುತ । ಘನ್ನ ಪಂಡಿತರೆಲ್ಲಾ ।
ಸನ್ನುತಾಂಗ ಶ್ರೀನಿವಾಸ । ನನ್ನು ಭಜಿಸುತಲಿಹರು॥ ೩ ॥

* * * * *

(ದಾಮಾಜಿಪಂಥ್ ಕಥೆಗೆ) ॥ ಹಾಡು ॥
(ಉತ್ತರಾದಿ ರಾಗದಲ್ಲಿ)

ರಾಗ : ಮಿಶ್ರಪೀಲು ತಾಳ : ಏಕತಾಳ

ಪೋದನ್ನೈ ಪಾಂಡುರಂಗ । ತಾ । ಪೋದನ್ನೈ ಪಾಂಡುರಂಗ ॥ ಪ ॥

ಬೀದರ ಪುರಕೆ । ಅತಿಶಯದಲಿ ತಾ ।
ಮಾದಿಗವೇಷವ । ಧರಿಸಿಕೊಂಡು ತಾ ॥ ॥ ಅ.ಪ. ॥

ಕರಿಯ ಕಂಬಳೀ ಶಿರಕೇ ಸುತ್ತಿ ।
ಕೊರಳೊಳು ಬಿಳಿಮಣಿ ಮಾಲೆಯ ।
ಧರಿಸೀ। ಮೆರೆಯುವ ಫಾಲದೊಳ್ । ಚಂದ್ರವನಿರಿಸೀ ।
ಪರಮ ಪುರುಷ ತಾ । ಕೋಲನೂರುತಾ ॥ ॥ ೧ ॥

ವದನದಿ ತಂಬಲ ತಾನುಗುಳುತಲಿ ।
ನೃಪನನು ಕಾಣಲು ಹಂಬಲಿಸುತಲಿ ।
ಕದನಗೈಯುತೇ ಕೇಕರಿಸುತಲೀ ।
ಮದನಜನಕತಾ ಮೋದದಿಂದಲಿ ॥ ॥ ೨ ॥

ತಾನೇ ಭಕ್ತನ ಅಕ್ಷರ ಬರೆದ ।
ಗೇಣು ಚೀಲದೀ । ಹಣವನು ತುಂಬಿದ ।
ನೇಣಿನಿಂದ ಬರಿ ಪೆಟ್ಟಿಗೆ ಬಿಗಿದ ।
ಶ್ರೀನಿವಾಸನು । ದಾಸನಾಗಿ ತಾ ॥ ॥ ೩ ॥

*　*　*　*　*

## (ಭಕ್ತ ದಾಮಾಜಿಪಂಥ್ ಕಥೆಗೆ)
## ಹಾಡು (ಉತ್ತರಾದಿ ರಾಗದಲ್ಲಿ )

ರಾಗ : ಮಿಶ್ರ ಕಾಪಿ　　　　ತಾಳ : ಏಕತಾಳ

ಸಲಾಂ ಮಾಡತೀನಿ ರಾಂ ರಾಂ ।
ಮಂಗಳ್ವೇಡೆಯಿಂದ ಬಂದೆ ರಾಂರಾ ॥ ॥ ಪ ॥

ಬಹುದೂರದಿಂದೆ ರಾಂ ರಾಂ ।
ಮಹರಾಜಾ ಮನ್ನಿಸಬೇಕು ರಾಂ ರಾಂ ॥ ॥ ಅ.ಪ ॥

ಇದ್ದ ದವಸವೆಲ್ಲಾ ರಾಂ ರಾಂ ।
ಬಂದಿದ್ದ ಭಕ್ತರಿಗಿತ್ತ ರಾಂ ರಾಂ ।
ಸಂದಿದ್ದ ಹಣವ ತುಂಬಿ ರಾಂ ರಾಂ ।
ಬುದ್ಧಿಯೋರ್‍ಗೆ ಕಳ್ಸಿಹ ಕೇಳಿ ರಾಂ ರಾಂ ॥ ೧ ॥

ತಂದೆ ತಾಯ್ಗಳೆನಗಿಲ್ಲಾ ।
ಹಿಂದೆ ಹೋದೋರ್‍ಗಿನ್ನೂ ತಿಳಿದಿಲ್ಲಾ ।
ಮನವಿತ್ತು ರಸೀತಿ ಕೊಡಿರಲ್ಲಾ ।
ಮಂಗಳ್ವೇಡೆ ಧಣಿಗೆ ಗೊತ್ತಿದೆಲ್ಲಾ ॥ ೨ ॥

ಸಂಭ್ರಕೇಳಿ ಬರಲಿಲ್ಲಾ । ಎನ್ನ ।
ನಂಬಿದೋರ್ಗೆ ಮೋಸವಿಲ್ಲ ।
ಶಂಭುಲಿಂಗನಾಣೆ ಪುಸಿಯಲ್ಲಾ ।
ಮಂಗಳ್ವೇಡೆ ಧಣಿಗೆ ಗೊತ್ತಿದೆಲ್ಲಾ ॥ ೩ ॥

ಪಂಡರಪುರವಾಸೀ । ನಾ ।
ಇಟ್ಟು ನಾಮಕ, ಪರದೇಶೀ ।
ವಿ । ಶಿಷ್ಟಜನರೋಳ್ ಸಂಭಾಷೀ । ಮನ,
ಮುಟ್ಟಿವಂದಿಪರ ಪೋಷೀ ॥ ೪ ॥

ಧನ ಮಾನವೆಂಬುದೆನಗಿಲ್ಲಾ । ಅದ
ಶ್ರೀನಿವಾಸ ಹೊರಬಲ್ಲಾ ।
ಮನುಜೇಶನಾಣೆ ಪುಸಿಯಲ್ಲಾ ।
ಮಂಗಳ್ವೇಡೆ ಧಣಿಗೆ ಗೊತ್ತಿದೆಲ್ಲಾ ॥ ೫ ॥

* * * * *

## ॥ ಅಥಣೀ ಶ್ರೀ ರಾಘವೇಂದ್ರ ಸ್ವಾಮಿಗಳ ಭಕ್ತ ಹೂಗಾರ ಭೀಮದಾಸ ಬಗ್ಗೆ ॥

ರಾಗ : ತಿಲಂಗ್ ತಾಳ : ಝಂಪೆ ತಾಳ

ಯಾಕೆ ಕಣ್ಮರೆಯಾದೆ । ಓ ಭೀಮ ದಾಸಾ...... ॥ ಪ ॥
ಸಾಕಾಯ್ತೆ ಸಾಧನವು। ಬೇಕಾಯ್ತೇ ನಾಕ-ಸುಖ ॥ ಅ.ಪ.॥

ಒದಗಿದಾ ಜವ್ವನದಿ । ಮಧುಸೂದನನ ಮರೆತು ।
ಸುದತಿಯರ ಮೋಹದಾ । ಬಲೆಗೆ ವಿಟನಾಗೀ ॥
ವಿಧವಿಧದಿ ನಾಟಕದ । ವಿಷಯಗಳ ನಲಿದುಂಡು ।
ಕುದಿದೆ ಯೌವ್ವನ ಕಳೆಯೇ । ಕರೆಕರೆಯ ದುಃಖದಲೀ
॥ ೧ ॥

ಕನಿಕರವ ಪಿಡಿದು ಹರಿ । ದೇಹನಶ್ವರವೆಂಬ ।
ಜ್ಞಾನವನು ಬಲಿಸಲ್ಕೆ । ಸತಿಸುತರ ತೊರೆದೂ ॥
ಮೌನದಿಂ ಪೊರಮಟ್ಟು । ಮಂತ್ರಾಲಯವ ಸೇರಿ ।
ಅನುದಿನದಿ ತಪಿಸುತಲಿ। ರಾಘವೇಂದ್ರರ ಪಿಡಿದೀ॥ ೨ ॥

ಕಳುಹೆ ಜಯತೀರ್ಥರಲಿ । ಶ್ರೀ ರಾಘವೇಂದ್ರಯತಿ ।
ನಿಲಿಸದೇ ಜಯಮುನಿಯು । ಗಣದ್ಹಾಳ ತೋರೇ ॥
ವಲಿಸಿ ಅನಿಲಜನನ್ನು । ಮಳಖೇಡ ನೀ ಸೇರೆ ।
ವಲಿದು ಟೀಕಾಚಾರ್ಯ । ವರವಿತ್ತು ಪೊರೆದಿರಲು ॥ ೩ ॥

ಮಂತ್ರಾಲಯವಸೇರು । ಗುರುಗಳಂಭಜಿಸೆನಲು ।
ಮಂತ್ರಾಕ್ಷತೆಯ ಕೊಂಡು । ಮಂತ್ರ ಸದನದಲೀ ॥
ಕಂತು ಜನಕನ ಕೃಪೆಯೊಳ್ । ಶ್ರೀ ರಾಘವೇಂದ್ರರೇ ।
ನಿಂತು ರಕ್ಷಿಪೆನೆನಲು । ಪೂತಾತ್ಮನೀನಾದೀ ॥ ೪ ॥

ಸತ್ಯ ಪ್ರಮೋದರಲಿ । ಮುದ್ರಾಂಕನವ ಪಡೆದೆ ।
ನಿತ್ಯಯಾತ್ರೆಯಲಿಂದ । ಮಠವಕಟ್ಟಿಸಿದೇ ॥
ಸತ್ಯ ಕರ್ಮಗಳಿಂದ । ರಾಯರನು ಸೇವಿಸಿದೆ।
ಅಥಣಿಯಲಿ ನೀನಿಂದು । ನಿಷ್ಕಾಮಿ ಎನಿಸಿರಲೂ॥ ೫ ॥

ಗುರುಗಳಾರಾಧನೆಯೊಳ್। ಬಹು ಜನರ ಮುದಗೊಳಿಸಿ।
ಮರಣ ಕಾಲವನರಿತು । ಹರಿಯ ಸ್ಮರಣೆಯಲೀ ॥
ವರಮಾಧವೇಶರಿಗೆ । ಗಳಿಸಿದರ್ಥವನೆಲ್ಲಾ ।
ಧಾರೆಯನು ಎರೆದಿತ್ತು । ನಿಶ್ಚಿಂತನಾಗಿರಲೂ ॥ ೬ ॥

ದಾಸರಾಯರ ಪಂಥ । ಪಿಡಿದು ಕೀರ್ತಿಯ ಗಳಿಸಿ ।
ದಾಸ ದಾಸರದಾಸ । ದಾಸನೆಂದೆನಿಸೀ..... ॥
ದಾಸವಿಜಯ ವರದ । ಶ್ರೀನಿವಾಸನ ಪುರಕೆ ।
ನೀಸಾಗಿಪೋದೆಯಾ । ಎಮ್ಮ ನಿಲ್ಲಿಯೆ ನಿಲಿಸೀ...॥ ೭ ॥

* * * * *

## (ಶ್ರೀ ರಾಮಾಶ್ವಮೇಧ ಕಥಾಪ್ರಸಂಗ)

ಲವಕುಶರ ಯುದ್ಧ ಪ್ರಸಂಗ ॥ ಶ್ರೀ ರಾಮಚಂದ್ರ ಕುಶಲವರಿಗೆ॥

ರಾಗ : ಸಿಂಧು ಭೈರವಿ ತಾಳ :

ಆರಚಿಣ್ಣನೀ । ನಾರಮಗನೋಪೇಳ್ ।
ಕುದುರೆ ಪಿಡಿವ ಛಲ ನಿಮಗೇಕೆ? ॥ ॥ ಪ ॥

ಸಾರುತೆ ರೋಷದಿಂ । ಮೀರಿದ ಶೌರ್ಯದೋಳ್ ।
ಎಮ್ಮಯ ಸೇನೆಯ ಕೊಲಲೇಕೆ? ॥ ॥ ಅ.ಪ ॥

ಆರಬಲವು ನಿಮ್ಮ ಕಾಯುತಿಹವು ಪೇಳ್ ।
ಮಾರನ ಪೋಲ್ವ । ಸುಮಕ್ಕಳಿರಾ ॥
ದಾರುಣ ಮಾಗಿಹ । ಕಾರ್ಮುಕವೇದವ ।
ಪ್ರೀತಿಯಿಂದಲಿ ಪೇಳ್ದ ಗುರುವಾರೋ? ॥ ॥ ೧ ॥

ಯಜ್ಞವಗೈಯ್ಯುವ । ನರಪತಿ ರಾಮನ ।
ತುರಗ ಕಟ್ಟುವ ಛಲಮೇಕೆ? ॥
ಧುರಕೆ ಬಂದ ಎನ್ನನುಜರ ಸದೆದಿರಿ ।
ಎಮ್ಮೊಳು ನಿರ್ದಯ । ನಿಮಗ್ಯಾಕೇ? ॥
ಶರದುರದೊಳು । ನಿಮ್ಮನು ಗೆಲ್ಲುವನರ ।
ಪೃಥುವಿಯೊಳಿಲ್ಲಾ । ಸಂಶಯವ್ಯಾಕೆ? ॥
ಮಾರಜನಕ ಶ್ರೀನಿವಾಸನ । ಕಿಂಕರ ।
ವೃಂದವ ತಡೆಯುವ. । ಮತಿಯಾಕೆ? ॥ ॥ ೨ ॥

* * * * *

## ॥ ಶ್ರೀ ರಾಮಾಶ್ವಮೇಧ ಕಥಾ ಪ್ರಸಂಗ ॥

ರಾಗ: ಮೋಹನ (ಮಿಶ್ರ ಮೋಹನ) ತಾಳ : ಅಟತಾಳ

ಶತ್ರುಘ್ನ: ತುರಗಕಟ್ಟಿದ ಪೋರನಾರಯ್ಯಾ? ॥

ಲವ : ಎಲೆ ಮರುಳೆ ಕೇಳೋ ।
ತುರಗ ಕಟ್ಟಿದ ವೀರ ನಾನಯ್ಯಾ ॥

ಶತ್ರುಘ್ನ: ಆರ ಅಶ್ವವೆಂದರಿತು ಕಟ್ಟಿದೆಯೋ?

ಲವ : ನಾ ಬಲ್ಲೆನಯ್ಯಾ ರಾಮನೆಂಬೋ ಓರ್ವ
ನರಕುರಿಯಾ ॥

ಶತ್ರುಘ್ನ: ಶೌರ್ಯವಂತರು ನಾವು । ಏಂ ಜರಿವೇ !

ಲವ : ಧುರಕಿಳಿಯೆ ನಿಮ್ಮ ಶೌರ್ಯಗಳ ನಾನಿಳಿಸಿ ನಾ
ಮೆರೆವೇ ॥

ಶತ್ರುಘ್ನ: ನಾನು ಬಂದಿಹೆ ಕುದುರೆ ರಕ್ಷಕನೋ ।

ಲವ : ನಾನು ನಿಂದಿಹೆ ಕುದುರೆ ಶಿಕ್ಷಕನೋ ।
ಅದಬಿಟ್ಟೆ ಯಾಕೆ?

ಶತ್ರುಘ್ನ: ಸ್ವೇಚ್ಛೆಯಿಂದಲೇ ನಾವು ಬಿಟ್ಟಿಹೆವೋ ।
ಯಜ್ಞಾಶ್ವ ಕೇಳೋ ॥
ಸ್ವೇಚ್ಛೆಯಿಂದಲೆ ನಾವು ಬಿಟ್ಟಿಹೆವೋ ॥

ಲವ : ಸ್ವೇಚ್ಛೆಯಿಂದಲೇ ನಾವು ಕಟ್ಟಿಹೆವೋ ।
ಅರಿತರಿತು ಕೇಳೋ ।
ಸ್ವೇಚ್ಛೆಯಿಂದಲೇ ನಾವು ಕಟ್ಟಿಹೆವೋ ॥

ಶತ್ರುಘ್ನ: ಕುದುರೆ ಮುಖದಲಿ ಏನಿಹುದು ನೋಡೋ ।

ಲವ : ನೋಡಿಹೆನು ಕೇಳೋ ಎರಡು ಕಂಗಳು ಒಂದೇ
ಮೂಗಿಹುದೋ ॥

ಶತ್ರುಘ್ನ: ಶ್ರೀನಿವಾಸನ ಅಶ್ವಮಿದು ನೋಡೋ ।
ನೀ ಕುದುರೆ ಮರೆತು ।
ಶ್ರೀನಿವಾಸನ ಕುಶ-ಲವನೆ ನೋಡೋ ॥

* * * *

## ॥ ಹನುಮದ್ವಿಲಾಸಕ್ಕೆ ಅನುಕರಣೀಯ ಪದ ॥

[ರಾವಣನಿಗೆ: ಹನುಮಂತ ಹೇಳಿದ್ದು ॥ ಪದ ॥]

ರಾಗ : ಹಂಸಾನಂದಿನಿ      ತಾಳ : ಆದಿತಾಳ

ನೀನೇನೋ.... । ರಾವಣನೆಂಬಾತನು ॥ ಪ ॥
ಕೇಳಿಹೆ, ತಾಳಿಹೆ । ಸಂಶಯ ಬಿಡಿಸು ನೀ ॥ ಅ.ಪ ॥

ದಾನವವಂಶಾಂಬುಧಿ ನಿಜ ಸೋಮನು ।
ಅತುಳ ಪರಾಕ್ರಮನು ॥
ಶ್ರೇಷ್ಠವಾದ ಪೌಲಸ್ತ್ಯಾನ್ವಯದಲಿ ।
ಪುಟ್ಟಿದ..... ದಶಮುಖನು ॥
ಬ್ರಹ್ಮನ ದಾರುಣ ತಪದಿಂ ಮೆಚ್ಚಿಸಿ ।
ವರಗಳ ಪಡೆದವನು ॥
ಸಾಮಗಾನದಲಿ ಸೋಮಶೇಖರನ ।
ತಲೆದೂಗಿಸಿದವನು ॥
ಧನಪನಜೈಸುತೆ । ಅಳಕಾವತಿಯನು ।
ಪಿಡಿದು ಪುಷ್ಪಕವೇರಿ [ಮೆರೆದ ಮಹಾತ್ಮನು] ॥ ೧ ॥

ತ್ರಿದಶರ ಶೆರೆ ಪಿಡಿದು । ಅತಿಶಯದಿಂದಲೀ ।
ಸೇವೆಯ ಕೊಳುವವನು ॥ ಮೆಟ್ಟಿ ಗ್ರಹಂಗಳ ಮೆಟ್ಟಲು
ಮಾಡುತೆ । ವಿಷ್ಟರ ಏರ್ದವನು ॥
ಇಂದ್ರಾರಿಯು ಎಂತೆಂಬ
ಭುಜಬಲನ । ತಂದೆ ಎನಿಸುವವನು॥ ಸ್ವರ್ಣನಗರದೊಳು
ಪೂರ್ಣ ವಿಭವದಿಂದ । ಸೌಖ್ಯದೊಳಿರುವವನು ॥
ಅಸುರ ಜನರ ಅಭ್ಯುದಯಕೆ ಕಾರಣ ।
ಯಶವಂತನು, ಅರಿ ಮದ-ಗಜ-ಕೇಸರೀ ॥ ೨ ॥

ಗಿರಿಯಡಿಯಲಿ ನಿಜ ತೋಳ್ಗಳು ಸಿಕ್ಕಿರೆ ।
ವರುಷ ಸಾಸಿರ ಕೂಗಿ। ಚೀರ್ದವನು ॥

ಬಲಿಮನೆ ಹೆಣ್ಗಳ ಕಾಲ್ಚೆಂಡಾದವ ।
ಕುಲಘಾತಕ ಖಳ । ದಶಮುಖನು ॥
ಕಾಮಾತುರದಲಿ ವೇದವತಿಯಳನು ।
ಕಾಮಿಸಿ, ಶಾಪವ ಕೊಂಡವನು ॥
ಪುಂಜಕಸ್ಥಳಿಯನು । ಬಲದಿಂ ಭೋಗಿಸಿ ।
ಕಂಜಭವನ ಶಾಪ ಪಡೆದವನು
ನಗಜಾರಮಣನ ಚಾಪವನೆತ್ತದೇ ।
ನಗೆಗೀಡಾಗುತೆ ರಕುತ ಕಾರ್ದವನು ॥ ೩ ।

ಕಾರ್ತವೀರ್ಯಾರ್ಜುನನ । ಕೆಣಕಿ ನೀ ಸೆರೆ ಸಿಕ್ಕು ।
ಆರ್ಯರ ದಯೆಯಿಂದ । ಬದುಕಿಕೊಂಡವನು ॥
ವಾಲಿಯ ಬಗಲೊಳಗೆ । ಸಿಗಿ ಬಿದ್ದು ವದ್ದಾಡಿ ।
ವಾಲಿಯ ಚರಣದಿ ಕರುಣೆ ಬೇಡ್ದವನು ॥
ಹತ್ತು ತಲೆ ಅಡಿಮಾಡಿ । ವಾಲಿ ತೊಟ್ಟಿಲೋಳ್ ಕಟ್ಟೆ ।
ಮತ್ತೆ ಕಂದನ ಕಾಲ । ಲತ್ತೆ ತಿಂದವನು ॥
ಭಾನುಕುಲೇಶ್ವರನಿಲ್ಲದ ಸಮಯದಿ ।
ಜಾನಕಿಯನು ಕದ್ದು ತಂದವನು ॥
ಶ್ರೀನಿವಾಸ ಶ್ರೀರಾಮನ ಶೌರ್ಯವ
ಬಣ್ಣಿಸಲನುಜನುಜನು । ಸಹಿಸದ ಮೂರ್ಖನು ॥ ೪ ॥

* * * * *

## ॥ ಖಡಕು ॥

ರಾಗ : ಪೂರ್ವಿ ತಾಳ : ಏಕತಾಳ

[ದುರ್ಯೋಧನ ಸೇನಾ ಪರಿವಾರ ಕಾಮ್ಯಕವನಕ್ಕೆ ಘೋಷಯಾತ್ರಾನಿಮಿತ್ತ ಹೋದ ಪ್ರಸಂಗ ಅದರ ವರ್ಣನೆ.]

ಪೊರವಂಟಾ-ಧೊರೇ-ಪೊರವಂಟಾ ॥
ಪೊರವಂಟಾ- । ಧೊರೇ-ಪೊರವಂಟಾ ॥ ॥ ಪ ॥

ಮಂದಗಮನೆಯರ ಸಂದಣಿಯೊಳು, ತಾ ।
ಅಂದದಿ ಪೊರಟನು ಕುರುಪನು ನಗುತಾ ।
ಬಂದಿಮಾಗಧರ ಕಾಲ್ಬಲದಲಿ ತಾ ।
ನಂದು ಪೊರಟ ಕರ್ಣಾದಿಗಳೊಳು ತಾ।
ಪೊಂದಿ ಬರ್ಪ ರಥಕರಿ ತುರಗದಿ ತಾ ।
ಚೆಂದದಿ ಕೇಕೆಯನ್ಹಾಕುತ ನಗುತಾ ।
ಇಂದು ಪಾಂಡವರ । ಕೆಣಕುವೆವೆಂದು ।
ಕಂದಿಸಿ ಕುಂದಿಸಿ । ನಲಿವೆವು ಎಂದು ।
ಕದನ ಕುತೂಹಲ ರಾಗವಿದೆಂದು ।
ಪರಿಪರಿಭೋಜ್ಯವ । ಮೆಲ್ಲುತ ನಡೆದು ।
ಪರಿಹಾಸ್ಯದಿ ಸುರೆಯಲಿ ಮೈಮರೆದು ।
ವಿಧವಿಧ ಭಾವದಿ । ನರ್ತನಗೈದು ।
ಉರುತರ ಗರ್ವದಿ । ಕೃಷ್ಣನ ಹಳಿದು ।
ಮುರಿವೆವು ಪಾಂಡವ ಬಲಗಳನೆಂದು।
ಜರಿ ಜರಿದಾಡುತ ಕೃಷ್ಣೆಯ, ನಲಿದೂ ।
ತರಿವೆವು ಅರಿಗಳ ಶಿರಗಳನೆಂದು ।
ಸುರೆ, ಮದವೇರಿಸೆ ಮಸ್ತಕಗಂದು ।
ಗುರು-ಗುರು ಘುಡು-ಘುಡು ಶಬ್ದದಿ ಮೆರೆದು ।
ವದರಾಡಲು ಪಡೆ ಮದ ಗರ್ವದಲೀ ।

ಏರಿದಧ್ವನಿ : ಮದವೇ....ರಿದ ಧೊರೆ ಕೇಳುತಾ-ನಗುತಾ ।
ಸರಿಯಾರೋ ಸುರೆ । ಸುರಿದಾರೋ ।
ಭುವಿ, ಮರೆದಾರೋ ॥ ೧ ॥

ಸಂದಿಹ ಮಿತ್ರರ ತಾ । ಮನ್ನಿಸಿದಾ ।
ಮುಂದ್ಹೋಗಲು ಧೊರೆ । ಆಜ್ಞಾಪಿಸಿದ ।
ಬಂದಿತು ಪಡೆಗಾಗಲೆ ಘನ ಸೊಕ್ಕು ।
ಸಂದಿಹ ನಿರ್ಜರ ವನವನೆ ಪೊಕ್ಕು ।

ನಿಂದಿಹ ತರುಗಳ ನೆಲಕುರುಳಿಸುತಾ ।
ಮುಂದೆ ಬರ್ಪ ಪ್ರಾಣಿಗಳನು ಕೊಲುತಾ ।
ಮುಂದೆ ಮುಂದೆ ಸಾಗುವ ಭರದಲಿ ತಾವ್ ।
ತಿಂದರು ಫಲಗಳ ಎಡಬಿಡದೆಲೆ ತಾವ್ ।
ಬಂದರು ಸರಸಿಗೆ ಈಸಾಡಲು, ತಾವ್ ।
ಅಂದರು ಕುರುಪತಿಗೀಡೇ? ಸುರಪತಿ ।
ಎನ್ನಲು ಪರಿಜನ, ಕೇಳುತ ನಗುತಾ... ॥

ಏರಿದಧ್ವನಿ:[ಮಝು-ಭಾಪುರೆಹೊಯ್। ಹೊಯ್ಯೆನುತಾ] ॥ ೨ ॥

ಬಂದಿಹರೆಲ್ಲರು ಭೋಗಿಗಳಹರು ।
ಸುಂದರಿಯರು ತಾವ್ । ಜೊತೆಗೂಡಿಹರು ।
ಮದದಲಿ ಮುದದಲಿ । ಮೈಮರೆತಿಹರು ।
ಮಧುಪಾನದಿ ಉರೆ ಮದವೇರಿಹರು ।
ಮದಗಜ ಗಮನೇರ । ಪಿಡಿದಾಡಿದರು ।
ಮದವೇರಿದ ಜನ । ತಾವೋಡಿದರು ।
ಮದನೋತ್ಸವಕೆಡೆ ತಡಕಾಡಿದರು ।
ವಿಧವಿಧ ಭೋಗಕೆ । ಮನಮಾಡಿಹರು ।
ಹೃದಯವ ಮದನನ । ಶರಕಿತ್ತಿಹರು ।
ಸ್ತ್ರೀಪುಂಭೇದವ । ತಾವ್ ಮರೆತಿಹರು ।
ಮಲೆವ ಮಾರುತಗೆ ಮೈತೆತ್ತಿಹರು ॥
ಸುಂದರ ನಿರ್ಜರ ವನಕೆಡಿಸಿಹರು ।
ಬಂದನು ಕುರುಪತಿ-ನೋಡುತ-ನಗುತಾ ।
ಸಂದನು ವನದಲಿ ಅನುಜನ ಸಹಿತಾ ।
ಮುಂದಾಗಿಹ ಕರ್ಣಾದಿಗಳೊಳು, ತಾ ।
ನೆಂದನು ಮಾವನ ಭಾಗ್ಯವಿದೆನುತಾ ।
ಸುಖವಾಗೇ-ಸೆರೆ। ಅತಿಯಾಗೇ। ಮತಿ ಮಸುಕಾಗೇ।

ಏರಿದಧ್ವನಿ :ಇಂದುವದನ ಶ್ರೀನಿವಾಸನ ಕಿಂಕರ ।
ವೃಂದವ ಕೆಣಕಲು । ಆಶಿಸಿ ನಗುತಾ ॥ ೩ ॥

* * * * *

## ॥ ಘೋಷಯಾತ್ರಾ ಪ್ರಸಂಗ ಹಾಡು ॥

[ಕುರುಪತಿಯನ್ನು, ಸುರಪತಿಯ ಆಜ್ಞೆಯಿಂದ ಚಿತ್ರಸೇನ ಗಂಧರ್ವ ಸೆರೆಹಿಡಿದು ಬಂಧಿಸಿ-ರಥದಲ್ಲಿ ಹಾಕಿಕೊಂಡು ಹೋದಾಗ-ರಕ್ಷಕರಾರೂ ಇಲ್ಲವಾಗಿರಲು ಅನಾಥೆಯಾಗಿ, ಭಾನುಮತಿ-ಕಂಗೆಟ್ಟು, ಕಳವಳಿಸಿದ, ಪ್ರಸಂಗ]

ರಾಗ : ಬಾಗೇಶ್ವರಿ (ಬಾಗೇಶ್ರೀ) ತಾಳ : ಝಂಪೆತಾಳ

ಗತಿ ಆರು ಈ ವನದಿ । ಕ್ಷಿತಿಪಾಲನಂಬಿಡಿಸೆ ।
ಅತಿಹಿತರು ಆರಿಹರು । ಪಟುಭಟರ ಸಂದಣಿಯೋಳ್
॥ ಪ ॥

ಮತಿಹೀನಪಿಶುಣಿಗಳು । ಪಾಂಡವರ ಪೀಡಿಸಲು ।
ಪತಿಗಿತ್ತ ಮತಿ ಕೃತಿಯೋಳ್ । ಮರುಳಾದೆವಕಟ॥ಅ.ಪ॥

ಧನದಾಸೆಯಿಂ ಕೆಲರು । ಅಶನ-ಪದವಿಗೆ ಕೆಲರು ।
ಅನುಸರಿಪ ಆಪ್ತಜನ । ತಾವೆಂದು ಕೆಲ ಕೆಲರು ॥
ಅನುಬಂಧಿಯೆಂತೆಂಬ । ಅಭಿಮಾನದಿಂ ಕೆಲರು ।
ಅನುನಯದಿ ಸುಖಪೊಂದಿ । ಅನುವಾಗದಿಹರೂ॥ ೧ ॥

ನಗು ನಗುತೆ ಮಾಡಿದೆವು । ಈಗಳುತ ಉಣ್ಣುವೆವು ।
ಜಗದೊಳಗೆ ನೈಜ ಸುಖ । ಅರಸಿ ಕಾಣೇ ॥
ನಗೆ ಪಾಟಲಾಯಿತೋ । ಇಂದೆಮ್ಮ ಭಾಗ್ಯ ಸುಖ ।
ನೆಗೆದು ಬಿದ್ದಿತು ಬಾಳು । ಮುಂದೆಲ್ಲ ಗೋಳೂ ॥ ೨ ॥

ಕಪಟದ್ಯೂತದಲಂದು । ಪಾಂಡವರ ನಟ್ಟಿದೆವು।
ವಿಫಲರಾದೆವ ಇಂದು । ರಣಕೆ ಸಂದು ॥

ಸುಫಲಕರ ಶ್ರೀನಿವಾಸ । ಕುಂತಿತನಯರಿಗಿರಲು ।
ಕುಪಥಿಗರು, ಕುರುಪತಿಯ । ಸುರಪಗಿತ್ತಿಹರೂ ॥ ೩ ॥

* * * * *

॥ ಹರಿಕಥೆಗೆ ॥ (ತಾಮ್ರ ಧ್ವಜ ಮಯೂರಧ್ವಜರ ಕಥೆ)
[ತಾಮ್ರ ಧ್ವಜ: ಶ್ರೀ ಕೃಷ್ಣನಿಗೆ-ಹೇಳಿದ್ದು ॥ ಪದ ॥]

ರಾಗ : ಬಾಗೇಶ್ರೀ ತಾಳ : ಝುಂಪೆತಾಳ

ಥರವಲ್ಲ ಥರವಲ್ಲ । ಹರಿಯೆ । ಸಂಗರ ನಿನಗೆ ।
ಪರಮ ಸಾಹಸವಂಥ । ನರನಿರಲು । ನಿನ್ನೆಡೆಯೋಳ್
॥ ಪ ॥

ದುರುಳ ಕೌರವರನ್ನು । ಸೂರೆಗೊಂಡಿಹ ವೀರ ।
ಕರ್ಣಾದಿ ಪಟುಭಟರ । ತರಿದ ಶೂರಾ..... ॥
ಗೌರಿಯರಸನ ಕೂಡೆ । ಕಾದಿಗೆಲಿದಿಹ ವೀರ ।
ಇರುತಿರಲು ನಗೆಗೇಡು। ಹರಿಯೆ ಇದಿರಾಗುವುದು॥ ೧॥

ನಿನ್ನ ಮರೆತವನಲ್ಲ । ಎನ್ನಾಣೆ ಪುಸಿಯಲ್ಲ ।
ಘನ್ನಮೂರುತಿ ನಿನಗೆ । ಸರಿ-ಸಾಟಿಯಿಲ್ಲ ॥
ಅನ್ನಂತ ಗುಣಪೂರ್ಣ । ನಿನ್ನ ಬಲವೇ ಬಲವು ।
ಎನ್ನಂತರಂಗದೊಳು । ನಿಂತು ಜಯವೀಯೋ ॥ ೨ ॥

ಪುಣ್ಯಫಲ ಬಲವಿತ್ತು । ಉಳಿಸಿದ್ದೆ ಈ ನರನ ।
ಪುಣ್ಯವರ್ಜಿತನಿವನ । ತನುವ ಕೊಂಬೇ ॥
ಬನ್ನಪಡಿಸದೆ ಬಿಡೆನು । ಇನ್ನು ಸಂಶಯವ್ಯಾಕೆ ।
ಧನ್ಯನಾಗಿಸು ಶ್ರೀನಿವಾಸ ಅಘನಾಶಾ.... ॥ ೩ ॥

* * * * *

[ತಾಮ್ರಧ್ವಜ ಅರ್ಜುನನಿಗೆ ಹೇಳಿದ್ದು ॥ ಪದ್ಯ ॥ (ಷಟ್ಪದಿ)]

ಕೃಷ್ಣನನು ನಾವ್ ತ್ಯಜಿಸಿಗೈದೆವು ।
ಸಪ್ತ ಮುಖಗಳ ಕೇಳು ಪ್ರಾರ್ಥನೆ ।
ತೃಪ್ತನಾಗುವ ತಾತ । ಕೃಷ್ಣನ ನೋಡಿದಾ ಕ್ಷಣದೀ ॥

ವ್ಯಾಪ್ತವಾಗುವುದೆಮ್ಮ ಕೀರ್ತಿಯು ।
ಆಪ್ತ ಜನ ಸಂಯುಕ್ತ ಸಭೆಯಲಿ ।
ಲುಪ್ತಗೈಸದೆ ಬಿಡೆನು । ನಿನ್ನಯಶ್ರಮವ ಕೇಳೆಂದ ॥

* * * * *

## ॥ ಹರಿಕಥೆಗೆ ಉಪಯೋಗವಾದ ಹಾಡುಗಳು ॥

॥ ಅಕ್ಷಯ ಪಾತ್ರೆ (ದೂರ್ವಾಸಾತಿಥ್ಯ) (ಈ ಕಥೆಗೆ) ॥

ರಾಗ : ಮೇಚ್ಛಭೌಳಿ ತಾಳ : ಝುಂಪೆತಾಳ

ಧರುಮನಂದನ ನಿನ್ನ । ಸಾರಿಬಂದೆನು ಕೇಳು ।
ಕರುಣಾಶ್ರುಲೋಚನದಿ । ಈಕ್ಷಿಸೆಮ್ಮಾ ॥ ಪ ॥

ದುರಿತಾಘನಾಶಕನ । ಕೃಪೆಯ ಪಡೆದಿಹ ನಿಮ್ಮ ।
ಕರದ ಭೋಜನಕಿಂತ । ಮಿಗಿಲಾದುದೆಮಗಿಲ್ಲ॥ ಅ.ಪ ॥

ದೇಶಾಟನೆಯಗೈದು । ಬಂದೆವೀ ಕಾನನಕೆ ।
ತೃಷೆಪಶಿವಿನಿಂ ಬಳಲಿ । ನಳಿಸುತಿಹೆವೋ ॥
ಹೃಷಿಕೇಶಪ್ರಿಯ ನಿನ್ನ । ಯಾಚಿಸಲು ಬಂದೆವೋ ।
ಹಸನಾದ ಭೋಜ್ಯವನು। ಈಯೇ ಭುಂಜಿಪೆವೋ॥ ೧ ॥

ಕ್ಷಿತಿಯೊಳನ್ಯರಕಾಣೆ । ನಿನ್ನ ಪೋಲುವ ನರರ ।
ಮತಿವಂತ ನೀನೆಂದು । ಬಿನ್ನೈಪೆವೋ ॥
ಗತಿ ನೀನೆ ಈವನದಿ । ಹಿತವಬಯಸುವರಿಲ್ಲ ।
ಕ್ಷಿತಿಪಾಲ ಶ್ರೀನಿವಾಸ । ಪ್ರಿಯನೆ ಪುಸಿಯಲ್ಲ ॥ ೨ ॥

* * * * *

ರಾಗ : ಬೇಹಾಗ್ ತಾಳ : ಆದಿತಾಳ

ಬಂದೆನು ದ್ರೌಪದಿಯೇ । ಭೀತಿಯೊಳು ।
ಬಂದೆನು ದ್ರೌಪದಿಯೇ ॥ ಪ ॥

ಸತಿಯರು ಪ್ರೀತಿಯೋಳ್ । ಬಡಿಸುವ ಎಡೆಯನು ।
ಮತಿಹೀನನಂದದಿ । ತೊರೆದು ಬಂದೆನೆ ತಂಗಿ ॥ ೧ ॥

ಅನ್ನಕ್ಕೆ ಕೊರತೆಯೇ । ಸೋದರಿಗೃಹದೊಳು ।
ಎನ್ನುವ ಭಾವದಿ । ಭಾವಿಸಿ ಬಂದೆನೆ ॥ ೨ ॥

ಮಾನವಪತಿ ಶ್ರೀನಿ । ವಾಸನೆ ಬಾರೆಂದು ।
ಧೇನಿಸಿ ಕರೆಯಲು । ನೋಡಿ ಬರುವೆನೆಂದು ॥ ೩ ॥

* * * * *

## ॥ ಮಮ ಮಾತೃ (ನನ್ನ ಜನ್ಮದಾತೆಯ) ಸ್ತುತಿ ಪದ ॥

ರಾಗ : ಅಠಾಣ ತಾಳ : ಝಂಪೆತಾಳ

ಉಪಕಾರ ಎಷ್ಟೆಂದು ಬಣ್ಣಿಸಲಿ ತಾಯೇ ॥ ॥ ಪ ॥
ಅಪರೂಪ ಈ ಯುಗದಿ । ತವರೂಪ ಮಾತೆಯರು
॥ ಅ.ಪ ॥

ನರಹರೀ ವಿಠ್ಠಲರ । ಹಿರಿಯಸುತೆ ನೀನಾದಿ ।
ಶಿರಿವಂತ, ದಯವಂತ । ಪತಿಯ ಕರಪಿಡಿದೀ ॥
ವರಗೃಹಿಣಿ ಧರ್ಮದಲಿ । ಜೀವನದಿ ಸುಖವುಂಡಿ ।
ಹರಿಭಕ್ತಿಯಲಿ ಮೆರೆದೆ । ಸೌಭಾಗ್ಯ ಸತಿಯೆನಿಸಿ ॥ ೧ ॥

ಸುತೆಯೋರ್ವಳುಳಿದಿರಲು । ಸುತರೀರ್ವರಳಿದಿರಲು।
ಸುತಲಾಭಕಾಂಕ್ಷೆಯಲಿ । ಹರಿಯಮನ ವಲಿಸೀ ॥
ಹಿತದಿ ಸ್ವಪ್ನದಿ ಪಡೆದೆ । ಸುತಲಾಭಕರ ವರವಾ ।
ಮತಿಗೆ ಮಂಗಳವೆನಿಸೆ। ಪತಿ-ಬಂಧು ಜನಕೆಲ್ಲ ॥ ೨ ॥

ಪಡೆದಿರಲು ವರಸುತನ । ಶ್ರೀನಿವಾಸನು ದಯದಿ ।
ಬಿಡದೆ ಸ್ವಪ್ನದಿ ಪೇಳಿ । ತನ್ನ ಪೆಸರಿಡಲು ॥
ಕಡೆಮಾಡಿ ನಿನ್ನ ನುಡಿ । ಗುರುರಾಜನೆಂದಿಡಲು ।
ತಡೆಯದೆಲೆ ಸದೆ ಬಡಿದು। ತನ್ನ ಪೆಸರಿಡಿಸಿದನು॥ ೩ ॥

ನಿನ್ನೆಲ್ಲ ಕಾರ್ಯವನು । ಮಾನಮರ್ಯಾದೆಯಲಿ ।
ಚೆನ್ನಾಗಿ ನಡೆಸುವನು । ನಿನ್ನ ಈ ಸುತನು ॥
ನನ್ನ ದಾಸ್ಯವ ವಹಿಸಿ । ಮಹಿಯೊಳಗೆ ಚರಿಸುವನು ।
ಘನ್ನ ಕೀರ್ತಿಯಗಳಿಸಿ । ಭಾಗ್ಯ ಬೆಳೆಸುವನು ॥ ೪ ॥

ಎಂದು ಶ್ರೀಹರಿವಲಿದು । ಸ್ವಪ್ನದಲಿ ನಿನಗರುಹಿ ।
ಅಂದು-ಅಂದದ್ದೆಲ್ಲಾ । ಮಾಡಿ ತಣಿಸಿದನು ॥
ಇಂದಿರಾಧವನಂಘ್ರಿ । ಬಿಡದೆ ಭಜಿಸುವ ಮಗನ ।
ಚೆಂದದಲಿ ಪೋಷಿಸಿದೆ । ನೀತಿ ಧರ್ಮದಲಿರಿಸೀ॥ ೫ ॥

ಹರಿಲೀಲೆ ಪಾಡುತಲಿ । ಮುದವಿತ್ತೆ ಜನಕೆಲ್ಲ ।
ಪರರಿಗುಪಕಾರದಲಿ । ಖ್ಯಾತಿಪಡೆದೇ.... ॥
ಶಿರಿತನದಿ ಬೀಗದೆಲೆ । ಬಡತನಕೆ ಅಳುಕದೆಲೆ ।
ನರಹರಿಯ ಪದಭಜಿಸಿ। ಇಹದಿ ಸೌಖ್ಯವ ಪಡೆದೇ॥ ೬॥

ಭಾಗ್ಯಹೀನರು ಬರಲು । ಆಶ್ರಯವ ನೀನಿತ್ತೆ ।
ಭಾಗ್ಯ ದೊರಕಿಸಿಕೊಟ್ಟು । ಸಂತೈಸಿದೇ..... ॥
ಭಾಗ್ಯದೇವತೆಯೆನಿಸಿ । ಮೃಷ್ಟಾನ್ನ ಜನಕಿತ್ತೆ ।
ಭಾಗ್ಯದೇವತೆಯಾಗಿ । ಮಕ್ಕಳನು ನೀ ಪೊರೆದೇ ॥ ೭ ॥

ಭೀಮಕ್ಕ ಭೀಮರಥೀ । ಎಂಬ್ಹೆಸರೋಳ್ವಿಖ್ಯಾತೆ ।
ಧಾಮ ಭೂಷಣೆ ಭೀಮ । ರಾಜೇಂದ್ರ ನಿಲಯೇ ॥
ಧೀಮಂತೆ, ರಾಜಸತಿ, । ಶ್ರೀಮಂತಗುಣ ಭರಿತೆ ।
ಭೀಮೇಶ ಭಕ್ತಿಯುತೆ । ಮಮಜನ್ಮದಾತೇ ॥ ೮ ॥

ಕರುಣೆಯಲಿ ನೀಪೊರೆದೆ । ಮುಂದಾದ ಸಂತತಿಯ ।
ಧರೆಯೊಳಗೆ ಸತ್ಕೀರ್ತಿ । ಧರಿಸಿ ಮೆರೆದೇ..... ॥

ಮರೆಯಲಾಗದ ಪ್ರೀತಿ-ವಾತ್ಸಲ್ಯ ತೋರಿಸಿದೆ ।
ಹರಸಿ ಕಿರಿಯರನೆಲ್ಲ । ಹರಿ ಪುರವ ನೀಸಾರ್ದೆ ॥ ೯ ॥

ಎಪ್ಪತ್ತು ವರುಷಗಳು । ತುಂಬಿರಲು ನನಗೀಗ ।
ತಪ್ಪದೆಲೆ ತಾನಿಹುದು । ಕರ್ತವ್ಯವೆರಡು.... ॥
ಒಪ್ಪದಿಂದಲಿ ಮುಗಿಸಿ । ಅರ್ಪಿಸುವೆ ಶಿರಿ ವರಗೆ ।
ಇರ್ಪ ಆಯುವ ಸವೆಸಿ। ಹರಿಪದವ ಸೇರುವೆನು॥ ೧೦॥

ಹರಸಿರಲು ನೀನಂದು । ಸಾಧಿಸಿದೆ ಎಲ್ಲವನು ।
ಹರಿಬಲದಿ ಗುರುಬಲದಿ । ಸಂಸಾರದೀ..... ॥
ಪಿರಿದಾಗಿ ನಡೆಸಿದೆವು । ಹತ್ತಾರು ಮದುವೆಗಳ ।
ವರಶ್ರೀನಿವಾಸನಡಿ । ದಾಸ ನಾನೆಂದೆನಿಸೀ ॥ ೧೧ ॥

* * * * *

## ॥ ವೈರಾಗ್ಯ ಭಾವದ ದೇವರನಾಮ ॥

ರಾಗ : ಕಾಂಬೋಧಿ ತಾಳ : ತ್ರಿಪುಟತಾಳ (ಛಾಪುತಾಳ)

ಸಾ-ಕಾ-ಯಿ-ತೋ ಶ್ರೀರಂಗ । ಈ ಸತಿಯ ಸಂಗ ।
ಸಾಕಾಯಿತೆಲೋ ಶ್ರೀರಂಗಾ.... ॥ ॥ ಪ ॥
ಬೇಕಾಯ್ತು ಎನಗೀಗ । ಭಾಗವತರ ಸಂಗ ॥ ಅ.ಪ ॥

ಬೇಕಾದ್ದು ಮಾಡಿಸಿದಿ । ಎನ್ನಿಂದ ಹಿರಿಯರಿಗೆ ।
ಸಾಕು ಸಾ...ಕೆಂಬ ತೆರ । ಮಡದೀ ಮಕ್ಕಳಿಗೇ ॥
ನೀ-ಕರು-ಣಿಸಿ । ಇತ್ತುದೆಲ್ಲಾ ವಿನಿಯೋಗಿಸಿದೆ ।
ಸಾಕು ಸಾಕೆನಿಸಿದೆ । ವೃದ್ಧಾಪ್ಯ ಸಂದಿದೆ ॥ ೧ ॥

ಕುಶಲದಿಬಾಳಿದೆ । ನಿನ್ನಿಂದ ಜಗದೊಳು ।
ವಶವಲ್ಲವೆಂಬಂಥ । ಸಂಸಾರದೀ ॥
ನಶಿಸಿತು ತಾರುಣ್ಯ । ಕಸಕ್ಕಿಂತ ಕಡೆಯಾದೇ ।
ಬಿಸಜ ನಾಭನೆ ನಿನ್ನ । ಕರುಣ ಕವಚತೊಡಿಸೋ॥ ೨ ॥

ಕೆಂಡದಮಳೆ ಕಾಣೋ । ಮಡದಿಯ ಬಿರುನುಡಿ ।
ಕಂಡಕಂಡಲ್ಲೀಗ । ಮಾನ ಭಂಗಾ ॥
ತಂಡ ತಂಡದಿ ಬಂದು । ಸುಡುವೋದು ಒಳ-ಹೊರಗೆ ।
ಪಿಂಡತಿಂಬುವಪಕ್ಷಿ । ದಂಡ ಪೌರುಷ ಹರಿಯೇ ॥ ೩ ॥

ಅಂಜಿದೆ ನಿನಗೆ । ನಿನ್ನವರಿಗೆ ಜಗದೊಳು ।
ಅಂಜದೇ ಬದುಕಿದೆ । ಕುಜನಕೋಟಲೆಗೇ ॥
ಭಂಜಿಸುಮಮಪಾಪ । ಅಂಜನಿಸುತನಾಥ ।
ರಂಜಿಸುತಿರಲೆನ್ನ । ಹೃದಯದಿ, ತವರೂಪ ॥ ೪ ॥

ನೋವ ನಂದಿಪರಿಲ್ಲಾ । ಭಾವ-ಅರಿಯುವರಿಲ್ಲಾ ।
ಕಾವೇರಿ ಕೆಟ್ಟಿಹುದು । ಜಗವೆಲ್ಲ ಹರಿಯೇ ॥
ಸಾಯ್ವದೇ ಒಳಿತೆಂದು । ಸುಜನರು ನಿರ್ಧರಿಸೆ ।
ಕಾಯ್ವರ ನಾಕಾಣೆ । ನಿನ್ನೊರ್ಹತು ಶ್ರೀನಿವಾಸ ॥ ೫ ॥

* * * * *

**॥ ಕಲಿಯುಗದ-ಈ ಕಾಲದ ಬಗ್ಗೆ ವರ್ಣನೆಯ ಪದ ॥**

ರಾಗ : ಶಿವರಂಜಿನಿ ತಾಳ : ಆದಿತಾಳ

ಕಾಡುತಿಹರು ಕಲಿಭೃತ್ಯರು ಸುಜನರ ।
ನೋಡಿ ಪೊರೆಯೋ ಹರಿಯೇ ।
ನೋಡಿಪೊರೆಯೋಧೊರೆಯೇ ॥ ॥ ಅ.ಪ ॥
ದೂಡಿದುಃಖದಲಿ । ಕೆಡಿಸುತ ಜಗವನು ।
ಖೋಡಿವಿದ್ಯಗಳ । ಬೆಳಸುತ-ಬಳಸುತ ॥ ॥ ಅ.ಪ ॥

ಸರಿಬಾರವು ಸಜ್ಜನಕೃತಿ ಧರ್ಮವು ।
ಗುರಿ ತೋರದು । ಜೀವನ ಪಥಕೇ ।
ಗುರಿತೋರದು ಜೀವನ ಪಥಕೆ ॥
ಹಿರಿತನ ಮೂರ್ಖಗೇ । ಕಿರಿತನ ಪರರಿಗೆ।

ಘೋರ ಕಲಿಯಾಗಿರೆ ಈ ಯುಗದೀ ।
ಘೋರ ಕಲಿಯಾಗಿರೆ ಈ ಯುಗದೀ ॥ ೧ ॥

ಕೇಳರು ಹಿತನುಡಿ । ಮಾಡರು ಧರ್ಮವ ।
ತಾಳರು ಸಜ್ಜನರೇಳಿಗೆಯ ।
ತಾಳರೋ ಸಜ್ಜನರೇಳಿಗೆಯ॥
ಮ್ಯಾಳದಿ ಮೆರೆವರು । ನರನಾರೀಜನ ।
ಬೀಳ್ವರು ಪತಿತರ ಬಲೆಗಳಲೀ ।
ಬೀಳ್ವರೋಪತಿತರ, ಬಲೆಗಳಲೀ ॥ ೨ ॥

ಧನಬಲಹೆಚ್ಚಿರೆ ನಿಂದ್ಯರು ವಂದ್ಯರೋ ।
ಘನಕಾಮುಕರತಿ ಬಲಯುತರು ।
ಘನಕಾಮುಕರತಿ ಬಲಯುತರು ॥
ಧನವುಳ್ಳವ ಧಾರ್ಮಿಕ ಜನಕಧಿಪತಿ ।
ಧನಬಲಹೀನನು । ಶವಸಮನು ।
ಧನಬಲಹೀನನು ಶವಸಮನು ॥ ೩ ॥

ಕಲಿಬಲಹೆಚ್ಚಿತು । ಸುರಬಲ ಕುಸಿಯಿತು ।
ತಲೆ ಹೆಚ್ಚಾದುದು । ಪಿಶುನರಿಗೇ ।
ತಲೆ ಹೆಚ್ಚಾದುದು ಪಿಶುನರಿಗೇ ॥
ಕಲೆಯಾಯಿತು ಹಾದರ ಕಥೆ ಚಿತ್ರವು ।
ಬೆಲೆ ಬಂದಿತು ಸಂಕರ ಕೃತಿಗೇ ।
ಬೆಲೆ ಬಂದಿತು ಸಂಕರ ಕೃತಿಗೇ ॥ ೪ ॥

ಧನಸುರೆ ಮೋಹಿತರ್ । ಅತಿ ಕೊಲೆಗಡುಕರು ।
ಜನಪಾಲಕರತಿ ಕಾಮುಕರು ।
ಜನಪಾಲಕರತಿ ಕಾಮುಕರು ॥
ದಿನದಿನದಲಿ ಸನ್ಮಾನದಿ ಮೆರೆವರು ।
ಅನಘರಾಗಿನಾವ್ ಇಹುದೆಂತು ।
ಅನಘರಾಗಿನಾವ್ ಇಹುದೆಂತು? ॥ ೫ ॥

ಮದಿರೆ ಮಾಂಸಗಳು । ಮಿಥ್ಯಾಚಾರವು ।
ವದಗಿ ಮೆರೆಯುತಿದೆ ವಿಪ್ರರಲೀ ।
ವದಗಿ ಮೆರೆಯುತಿದೆ ವಿಪ್ರರಲೀ ॥
ವದನವು ಹಳಸಿದೆ । ಮನೆಯಲಿ ಹೊಲಸಿದೆ ।
ಕದನವು ಸಾಗಿದೆ ಶಿಷ್ಯರಲೀ ।
ಕದನವು ಸಾಗಿದೆ ಯತಿಗಳಲೀ ॥ ೬ ॥

ರೋಗರುಜಿನಗಳು । ಪಾಪ ಕರ್ಮಿಗಳು ।
ನೀಗದ ಋಣಗಳು ಗೃಹಗೃಹದೀ ।
ನೀಗದಾಋಣಗಳು ಗೃಹಗೃಹದೀ ॥
ತ್ಯಾಗದ ಸೋಗಿಲಿ । ಯೋಗಿಗಳಸದಳ ।
ಭೋಗವಿಲಾಸದಿ ಮೆರೆದಿಹರು ।
ಭೋಗವಿಲಾಸದಿ ಮುಳುಗಿಹರು ॥ ೭ ॥

ಹುಚ್ಚು ಕುಣಿತಗಳು । ತುಚ್ಛ ಗೀತೆಗಳು ।
ಮುಚ್ಚದ ತನುಗಳು ಚಿತ್ರಗಳು ।
ಮುಚ್ಚದಾತನುಗಳು ಚಿತ್ರಗಳು ॥
ಹೆಚ್ಚಿತು ಮದನೋತ್ಸವ ಕಥೆ-ಕಲೆಗಳು ।
ಕೊಚ್ಚಿತು ಸುಜನರ ಸನ್ಮತಿಯಾ ।
ಕೊಚ್ಚಿತೋ ಸುಜನರ ಸಂಸ್ಕೃತಿಯಾ ॥ ೮ ॥

ಕಡಿದರು ವನಗಳ । ತಡೆದರು ನದಿಗಳ ।
ದುಡಿದು ಪಡೆದಿಹರು । ಕ್ಷಾಮಗಳಾ ।
ದುಡಿದು ಪಡೆದಿಹರೋ ಕ್ಷಾಮಗಳಾ ॥
ಬಡತನ ತೊಲಗದು । ಒಡೆತನ ಉಳಿಯದು ।
ಹಿಡಿಕೂಳಲಿ ಪ್ರಾಣ ಪಿಡಿದಿಹರು ।
ಬಿಡೆ ಇಲ್ಲದೆ ಮಾನ । ಬಿಡುತಿಹರು ॥ ೯ ॥

ಯತಿ ದಂಪತಿಗಳ । ರತಿ ಪತಿ ಲೀಲೆಯು ।
ಯತಿ ಸಂಸಾರಕೆ । ಮಾನ್ಯತೆಯು ।
ಯತಿ ಸಂತಾನಕೆ ಪೂಜ್ಯತೆಯು ॥
ಅತಿ ಧನದಾಸೆಯು । ಕೆಡಿಸಿತೋ ಇವರನು ।
ಇತಿಮಿತಿ ಇಲ್ಲದೆ ತಿರುಗಿಸಿತೋ ।
ಮತಿ ಹಿಂಗಿಸಿ ಹಾನಿ ದೊರಕಿಸಿತೋ ॥ ೧೦ ॥

ಮುಟ್ಟು ಮೈಲಿಗೆ ಇಲ್ಲ । ಸ್ಪರ್ಶ ದೋಷಗಳಿಲ್ಲ ।
ಸುಷ್ಟು ಮಾತುಗಳಿಲ್ಲ । ನಿಲುವಿಲ್ಲಾ ।
ಸ್ಪಷ್ಟ ಭಾಷೆಗಳಿಲ್ಲಾ ನಿಲುವಿಲ್ಲಾ ॥
ಕಷ್ಟ ಕೇಳುವರಿಲ್ಲಾ । ನಿಷ್ಠರ ನಡೆಯಿಲ್ಲಾ ।
ಸೃಷ್ಟಿಲಿ ಭ್ರಷ್ಟತೆ ಮಿಗಿಲಾಯ್ತೋ ।
ಭ್ರಷ್ಟಾಚಾರವೇ ಹೆಚ್ಚಾಯ್ತೋ ॥ ೧೧ ॥

ವರ ಶಿಷ್ಯ ಸತಿಯರಲಿ । ಗುರು ಜನರ ರತಿ ಕೇಳೀ ।
ಗುರುಸತಿಯರ ಕೇಳೀ ಶಿಷ್ಯರಲೀ ।
ಪರಸತಿಯರ ಕೇಳಿ ಶಿಷ್ಯರಲಿ ॥
ಮುರಿದು ಬಿದ್ದಿತು ಧರೆಗೆ । ಮೆರೆದ ಧರ್ಮ ಧ್ವಜ ।
ಬೆರೆತು ಹೋಯಿತು ಪಾಪ । ಸುಜನರಲೀ ।
ಬೆರೆತು ಹೋಯಿತು ಪುಣ್ಯ ಪಾಪದಲೀ ॥ ೧೨ ॥

ಮಾತಿಗೆ ಬೆಲೆಯಿಲ್ಲ । ನೀತಿಗೆ. ನೆಲೆಯಿಲ್ಲಾ ।
ನೀತಿವಂತರಿಗಿನಿತೂ ಖ್ಯಾತಿಯಿಲ್ಲ ।
ನೀತಿವಂತರಿಗಿನಿತೂ ಸ್ಥಾನವಿಲ್ಲಾ ॥
ಭಾತಿವುಳ್ಳವರೆಲ್ಲಾ ಪಾಪಕರ್ಮದಿರತರು ।
ಘಾಸಿಗೊಳಿಪರಲ್ಲೋ ಸುಜನರ ಹರಿಯೇ ।
ಘಾಸಿ ಬಿಡಿಪರಿಲ್ಲೋ ಸುಜನರ ಧೊರೆಯೇ ॥ ೧೩ ॥

ಕೇಳಲು ಆಗದು । ಪೇಳಲು ಮುಗಿಯದು ।
ಬಾಳ್ವದೇ ಘೋರವು । ಈ ಯುಗದೀ ।
ಬಾಳ್ವದೇ ಘೋರವು ಈ ಯುಗದೀ ॥
ಖೂಳರು ಪ್ರಬರು ವಿಜ್ಞಾನಾಸ್ತ್ರದಿ ।
ಜಾಲವನಿರ್ಮಿಸಿ ಕೊಲುತಿಪರು ।
ಜಾಲವನಿರ್ಮಿಸಿ ಕೊಲುತಿಹರು ॥ ೧೪ ॥

ದಾರಿಯು ಕಾಣದು । ಬಾಳಲು ಸುಜನರು ।
ಘೋರವು ಈ ಕಲಿ-ಯುಗ ಹರಿಯೇ ।
ಘೋರವು ಈ ಕಲಿಯುಗಹರಿಯೇ ॥
ಸೇರಿದ ಪಾಪವ । ತೊಲಗಿಸು ಪ್ರತಿಕ್ಷಣ ।
ಮಾರಾಂತಕ ಪ್ರಿಯ । ಶ್ರೀನಿವಾಸಾ ।
ಮಾರಾಂತಕಪ್ರಿಯ ಶ್ರೀನಿವಾಸ ॥ ೧೫ ॥

* * * * *

## ॥ ಶ್ರೀಹರಿಯಲ್ಲಿ ನಿವೇದನ ಪದ ॥
## ॥ ಸಂದಿತು ಅರವತ್ತು ವರುಷ ಈ ಕಾಯಕ್ಕೆ ॥

ರಾಗ : ಆನಂದಭೈರವಿ ತಾಳ : ಆಟತಾಳ

ಸಂದಿತು ಅರವತ್ತು ವರುಷ ಈ ಕಾಯಕ್ಕೆ ।
ಇಂದಿರೇಶನೆ ನಿನ್ನ ಕರುಣದಲೀ ।
ಪ್ರಾಣೇಶನ ದಿವ್ಯಕರುಣೆಯಲಿ ॥ ಪ ॥

ಮಂದನು ಈ ಕಂದನೆಂದು ಕೃಪಾಂಬುಧೇ ।
ತಂದೆ ತಾಯಿ ಬಂಧು ಬಳಗ ನೀನಾದೆಯೋ ॥ ಅ.ಪ ॥

ಬಡತನಬೆಂಬತ್ತಿ । ಬಾಲ್ಯದಿ ಕೊಲುತಿರೆ ।
ಬಿಡದೆ ಕೈಪಿಡಿದೆನ್ನ । ಕಡೆಹಾಯಿದೀ ॥

ಧೃಡತತ್ವ ಜ್ಞಾನವ । ಕೊಡಿಸಿದಿ ಬುಧರಿಂದ ।
ಪೊಡವಿಲಿ ಘನ । ಹರಿದಾಸನೆಂದೆನಿಸಿದಿ ॥ ೧ ॥

ತಂದೆತಾಯ್ಗಳು ಮಿಕ್ಕ । ಬಂಧು ಜನರು ಮತ್ತೆ ।
ಬಂದ ಅತಿಥಿ ಜನಕೆ । ಮಿತಿಯಿಲ್ಲವೋ ॥
ಬಂದು-ಇದ್ದವರೆಲ್ಲಾ ತೃಪ್ತೀಲಿ ಉಂಡುಟ್ಟು ।
ಚೆಂದಾಗಿ ಹರಸಿ । ಪೋದರು ದಿನ ದಿನದಲ್ಲಿ ॥ ೨ ॥

ಹತ್ತಾರು ಮದುವೆ ಮುಂಜಿಗಳ ನೀ ಮಾಡಿಸಿ ।
ಬಿತ್ತರಿಸಿದೆ ಖ್ಯಾತಿ ರಾಜ್ಯದೊಳು ॥
ಕುತ್ತುಗಳನೆಲ್ಲಾ । ಬಿಡಿಸಿ ಸಂಸಾರದಿ ।
ಇತ್ತು ಸುಖದಬಾಳ್ವೆ । ಹತ್ತಾರು ವರುಷದಿ ॥ ೩ ॥

ಸಂಸಾರ ಬಲು ಹಿರಿದು । ತಾಪ ಕಾಣಲಿಲ್ಲೋ ।
ಹಂಸಗಮನಪಿತ । ಸಟೆಯಲ್ಲವೋ ॥
ಹಿಂಸಿಸಿದರೂ ಒಂದು ಕಾಸು ಇಲ್ಲದ ದಾಸ ।
ಸಂಶಯ ಧರೆಗೆಲ್ಲ । ಇದ ಬಲ್ಲೆ ನೀ ಎಲ್ಲ ॥ ೪ ॥

ಹರಿಯೇ ನೀ ನೆರವಾಗೆ । ಸತಿಸುತರ್ಧಿತರಾಗಿ ।
ಸುರತತಿನೆರವಾಗಿ ತಾಪನೀಗೀ ॥
ಧರೆ ಜನ ಬೆರಗಾಗಿ । ಋಣಕ್ಲೇಶ ತೊಲಗ್ಹೋಗಿ ।
ಕಾರ್ಯ ಸಫಲವಾಗಿ । ರೋಗರುಜಿನನೀಗೀ ॥ ೫ ॥

ಸತಿಸುತ ಅಳಿಯ । ಮೊಮ್ಮೊಕ್ಕಳ ಸಹಿತಾಗಿ ।
ನೀನಿತ್ತ ಗೃಹದಲ್ಲಿ । ಸುಖ ಉಂಬೆನೋ ॥
ಮಿತಕರ್ಮಿನಾನಯ್ಯ । ಬಲಿಸಲಿಲ್ಲವೋ ಭಕುತಿ ।
ಖತಿಗೊಳಪಡಿಸದೆ । ಗತಿನೀಡು ಶ್ರೀಕೃಷ್ಣ ॥ ೬ ॥

ಆಯುರಾರೋಗ್ಯಕ್ಕೆ । ಚ್ಯುತಿ ಬರಲೀಸದೆ ।
ಕಾಯಜಪಿತ ಮಾನ । ಕಾಯ್ದೆ ಜಗದೀ ॥

ನ್ಯಾಯದಿಂ ದಾಸರ । ಭಾಗ್ಯವೇ ನಿನದಯ್ಯ ।
ಬಾಯಬಿಡಿಸಬ್ಯಾಡೋ । ಪರರಿಂಗೆ ಜಗದೀಶ ॥ ೭ ॥

ಸುಜನರೊಳ್ ಮೆರೆದೆನೋ । ಕುಜನರ ಜರಿದೆನೋ ।
ನಿಜತತ್ವ ಅರಿತು ಸಾರಿದೆ ಜಗದೀ... ॥
ಭಜಿಸಿದೆ ಗುರುವರರ । ತ್ಯಜಿಸಿದೆ ಮದಗರ್ವ ।
ಭುಜಿಸಿದೆ ಇಹ ಸೌಖ್ಯ । ನೀನಿತ್ತ ವರ-ಬಲದಿ ॥ ೮ ॥

ಕೆಂಡಕಾರುವರೆಲ್ಲಾ । ಕಂಡು ಕೈಮುಗಿವರೋ ।
ಭಂಡು ಮಾಡಿದ ಜನರು । ಕಹಿ ಉಂಡರೋ ॥
ಹಿಂಡು ಬಳಗ ಬಂಧು । ಸ್ತುತಿಪರು ಪರಿಪರಿ ।
ಹೆಂಡಿರು ಮಕ್ಕಳು । ಪ್ರಗತಿ ಕಂಡರು ಹರಿಯೇ ॥ ೯ ॥

ಧರೆಯೊಳು ಸತ್ಕೀರ್ತಿ । ಯತಿವರರೋಳ್ ಸನ್ಮಾನ ।
ಪರಿಪರಿ ವಿಧದಲಿ । ನೀನಿತ್ತೆಯೋ... ॥
ಹರಿದಾಸ ವೃತ್ತೀಲಿ । ಜೀವನ ನಡೆಸಲ್ಕೆ ।
ಇರಿಸಿ ಸತ್ಪಥದಲ್ಲಿ । ಸದ್ಭಕ್ತಿ ಬೆಳಸಿದಿ ॥ ೧೦ ॥

ಹಿಡಿಸಿದಿ ವೈರಾಗ್ಯ । ನುಡಿಸಿದಿ ಪದ ಪದ್ಯ ।
ನಡೆಸಿದಿ ಶ್ರೀಮಧ್ವ । ಮತದಿ ಎನ್ನ ॥
ಧೃಡವಾಗಿ ಕೊಡು ಎಂಬೆ । ಕಡಿದು ಭವವ, ಮುಕ್ತಿ ।
ಒಡೆಯ ಶ್ರೀವೆಂಕಟ । ಮಧ್ವೇಶ-ಶ್ರೀನಿವಾಸ ॥ ೧೧ ॥

* * * * *

**[ಶ್ರೀ ಹರಿಯಲ್ಲಿ ಎಪ್ಪತ್ತು ವರುಷ ನನಗೆ ತುಂಬಿದ್ದಕ್ಕೆ ಪ್ರಾರ್ಥಿಸಿ. ಮಾಡಿದ ಪದ-ಇದು]**

ರಾಗ : ಬೇಹಾಗ್ — ತಾಳ : ಆದಿತಾಳ

ಮುಂದೆನ್ನ ಕಾಯಬೇಕೋ । ಹೇ ಪಾಂಡುರಂಗ ।
ಮುಂದೆನ್ನ ಕಾಯಬೇಕೋ ॥ ॥ ಪ ॥

ಅಂದಿನಾರಭ್ಯ ನೀ । ಇಂದಿಸವರೆಗೆ, ಕೈ ।
ಕಂದನ ತೆರದಲಿ । ಬಿಡದೆನ್ನ ಸಲಹಿದಿ ॥ ॥ ೧ ॥

ಘೋರ ಕಲಿಯಕಾರ್ಯ । ಭೀತಿ ಪಡಿಸುತಿದೆ ।
ದಾರಿ ಕಾಣದೆ ನಾನು । ಕಂಗೆಟ್ಟು ಸಾಗಿರೆ ॥ ॥ ೨ ॥

ಬಲವಿಲ್ಲ ಕರಣದಿ । ನಿಲುವಿಲ್ಲ ಸತ್ಪಥದಿ ।
ಒಲವಿಲ್ಲ ಜೀವನದಿ । ಕಲಿಕಾಲ, ನಳಿನಾಕ್ಷ ॥ ॥ ೩ ॥

ಬಿಂಬನೆ ಎನ್ನೊಳು । ತುಂಬಿಸಿ ಧೈರ್ಯವ ।
ಸಂಭ್ರಮದಲಿ ಎನ್ನ । ಕಾರ್ಯ ಸಾಧಿಸಿಕೊಟ್ಟೇ॥ ॥ ೪ ॥

ಸಂದಿರೆ ಎಪ್ಪತ್ತು । ವರುಷ ಈ ಕಾಯಕ್ಕೆ ।
ಇಂದಿರೆಯರಸನೆ । ಮಮತೆ ಕವಚವಿತ್ತು ॥ ॥ ೫ ॥

ಚೆನ್ನೆ ರುಕ್ಮಿಣಿಯರಸ । ನಿನ್ನ ದಾಸನೋ ನಾನು ।
ಬೆನ್ನ ಬಿಡದೆ ಕಾಯೋ । ಮಧ್ವೇಶ ಶ್ರೀನಿವಾಸ॥ ॥ ೬ ॥

* * * * *

## ॥ ಶ್ರೀರಸ್ತು ॥
## ॥ ಮಂಗಳ ಪದ ॥

ರಾಗ : ಬೇಹಾಗ್ ತಾಳ: ಆದಿತಾಳ

ಜಯ ಜಯ ಮಂಗಳಂ । ಶ್ರೀ ಶ್ರೀನಿವಾಸಾ.... ।
ಜಯ ಶುಭ ಮಂಗಳಂ । ಗಿರಿ ವೇಂಕಟೇಶಾ ॥ ಪ ॥

ಜಯ ಜಯ ಲಕ್ಷ್ಮೀ । ಕಾಂತ ವಿಲಾಸ..... ।
ಜಯ ಜಯ ಸುಜನರ । ಭಕ್ತಿ-ವಿಕಾ..ಸ.... ॥ ಅ.ಪ ॥

ಬಂದುವದೆಯೆ ಭೃಗು । ವರ್ಯ ಎದೆಗೆ, ಶಿರಿ ।
ಅಂದು ತಾಳದೆಲೆ । ತೆರಳೆ ಮಂದಿರದಿ ॥

ಸುಂದರ ವೈಕುಂಠ । ತ್ಯಜಿಸಿ ಧರೆಗೆ ಬಂದು ।
ನಿಂದು ನೀ ತಿಂತ್ರಿಣಿ । ಹೊದರನಾಶ್ರಯಿಸಿದೆ ॥ ೧ ॥

ತುರು-ಕರ ರಕ್ಷಿಸೆ । ತಲೆಯ ವಡೆದುಕೊಂಡೆ ।
ಪರಿಚರ್ಯವ ಕೊಂಡೆ । ಬಕುಳೆಯಲೀ ॥
ಪರಿ ಪರಿ ವಿಧದಲಿ । ಕೆಣಕಿ ಪದ್ಮಾವತಿಯ ।
ಕರ ಶಿಲೆಯೊಳು ನಿನ್ನ । ಘಣೆಯಾವಡೆಸಿಕೊಂಡೆ ॥ ೨ ॥

ಚೆಂದಾದ ಕೊರವ್ವಾಗಿ । ಧರಣಿ ದೇವಿಯ ಕಂಡೀ... ।
ಮುಂದಾಗ್ವ ಲಗ್ನಕೆ । ಅಣಿ ಮಾಡಿಕೊಂಡೀ... ॥
ಅಂದದಿಂಕಣಿ ಪೇಳಿ । ನೀಭಾಷೆ ಕೊಂಡೀ... ।
ನಿಂದಿರದೆ ಸುರವೃಂದ । ಬರೆ, ತೃಪ್ತಿಗೊಂಡೀ... ॥ ೩ ॥

ಸತಿಯಳ ಕರೆಸಿದಿ । ಲಗ್ನಕಾರ್ಯಕೆ ತ್ವರದೀ ।
ಸತಿಯಳ ಮತಿಯಲ್ಲಿ । ಹರುಷ ತುಂಬಿಸಿದೀ ॥
ಹಿತವಾಗೆ ಜನಕೆಲ್ಲ । ಲಗ್ನ ಕಾರ್ಯದಿ ಮೆರೆದೀ ।
ಪತಿಯಾದೆ ಪದುಮೆಗೆ । ವರನಾಗಿ, ಭರದೀ ॥ ೪ ॥

ಆಕಾಶರಾಯಗೆ । ಸಾಯುಜ್ಯ ಪದವಿತ್ತೆ ।
ನಾಕೇಶ ಮುಖ್ಯರಿಗೆ । ಮುದವಿತ್ತೇ ॥
ಲೋಕೇಶ ನಿನ್ನಯ । ಕಥೆಯೇ ಮಂಗಳ ವೈಯ್ಯ ।
ನೀ ಕಾಯೋ ಕರುಣದಿ । ಪದ್ಮೇಶ-ಶ್ರೀನಿವಾಸ.. ॥ ೫ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

**[ಅಖಿಲಭಾರತ ಮಾಧ್ವ ಪಂಡಿತರ ಸಮ್ಮೇಲನ ಧಾರವಾಡ**
**(ಇದರಲ್ಲಿ ಭಾಗವಹಿಸಿ, ಹರಿಕಥಾ ಮಾಡಿದ ಸಂದರ್ಭದಲ್**

[ಸತ್‌ಕೀರ್ತನಾಲಂಕಾರ: । ಹರಿಕಥಾರತ್ನಂ । ಹರಿಕಥಾಕೇಸರಿ ಹರಿಕಥಾಚತುರಃ ಇತ್ಯಾದ್ಯನೇಕ ಬಿರುದಾಂಕಿತರಾದ ವಿದ್ವಾ (ಶಿವಮೊಗ್ಗಾ) ಶ್ರೀ ಶ್ರೀನಿವಾಸದಾಸರು ॥ ಇವರ ॥ ಪ್ರಶಂಸರಾಪ ಶ್ಲೋಕಾಃ ॥]

ಶ್ರೀನಿವಾಸ ಕೃಪಾಪಾತ್ರಃ । ಶ್ರೀನಿವಾಸಾಭಿಧೇಯಭಾಕ್
ಸಜ್ಜನಾಲ್ಹಾದಕಕಥಾಕಾರೋ । ಭಾತಿ ಹಿ ಸಂಸದಿ ॥

ನವರಸರಮಣೀಯಾಂ । ಆದರಾಕರ್ಣನೀಯಾಂ ।
ಗುಣಗಣಹರಿಲೀಲಾ ವರ್ಣನಾನ್ನಿತ್ಯರಮ್ಯಾಂ ॥
ಸರಸಹರಿಕಥಾಂ ವೈ । ಶ್ರಾವಯಂತಶ್ಚ ಮಾನ್ಯಾಃ ।
ವರಸದಸಿ ಮಮ್ಮೈವಾಭಾಂತಿ । ಸದ್ಭಾರತೇಽಸ್ಮಿನ್ ॥

[ಬೆಳಗಾಂ ಮಾರುತಿಗಲ್ಲಿ ಮಾರುತಿಗುಡಿಯಲ್ಲಿ ಶ್ರೀ ಪುರಂದ ಕನಕದಾಸರ ಉತ್ಸವದಲ್ಲಿ]

ಬೇಳಗಾಂವಪುರೇ ರಮ್ಯೇ ರಾಮಾಚಾರ್ಯ ಸುಮಾನನೇ ।
ಸಜ್ಜನಾಲ್ಲಾದಕಕಥಾಕಾರಾಃ ಸುಜನಶಂಸಿತಾಃ ॥

[ಭಾರತ ರಾಷ್ಟ್ರಪ್ರಶಸ್ತಿ ವಿಜೇತೃ ಪೂಜ್ಯ ಗಲಗಲಿ ರಾಮಾಚಾರ್ಯ ಸತ್ಕಾರ - ಸಭಾದಲ್ಲಿ ]

ಕೇಚಿದ್ವಿದ್ವದ್ವರ ಸುಮಧುರಾಂ । ಸತ್ಕಥಾಂ ನಿತ್ಯರಮ್ಯಾಂ ।
ಕೇಚಿಜ್ಞಾನ್ಯದ್ವರ ವಿಷಯಿಣೀಂ । ಸತ್ಕಥಾಂ ಸಾರ್ವಕಾಲೇ॥

ರಮ್ಯಾಂ ಸ್ತುತ್ಯಾಂ ಹರಿಗುರುಪರಾಂ ।
ಸತ್ಕಥಾಂ ವರ್ಣಯಂತಃ ॥
ಏತೇ ಧನ್ಯಾಃ ಧರಣಿತಿಲಕಾಃ । ಶ್ರೀನಿವಾಸಾಭಿದಾನಾಃ ॥

[ಸತ್ಕೀರ್ತನಾಲಂಕೃತಶ್ಚ ತಥಾ ಕೀರ್ತನಕೇಸರೀ
ಶ್ರೀನಿವಾಸಾಖ್ಯ ದಾಸೋಽಯಂ ಶತಂ ವರ್ಷಾಣಿ ಜೀವತು]

[ ಮ॥ಶಾ॥ಸಂ॥ ನ್ಯಾಯವೇದಾಂತ ವಿದ್ವಾನ್ ಪೂಜ್ಯ
ಉಮರ್ಜೀ ದಾಮೋದರಾಚಾರ್ಯರು ಬೆಳಗಾಂ
ಇವರಿಂದ ರಚಿಸಲ್ಪಟ್ಟದ್ದು ॥ ]

* * * * *

|| ಅಶ್ವಧಾಟೀ ||

ಶ್ರೀ ರಾಘವೇಂದ್ರ ಗುರೋ। ಶ್ರೀ ರಾಘವೇಂದ್ರ ಗುರೋ।
ಶ್ರೀ ರಾಘವೇಂದ್ರ ವರದ.....।
ಶ್ರೀ ರಾಘವೇಂದ್ರ ಗುರೋ। ಶ್ರೀ ರಾಘವೇಂದ್ರ ಗುರೋ।
ಮಾಂ ಪಾಹಿ ದೇವ ಕೃಪಯಾ॥

ವಿ. ಶಿವಮೊಗ್ಗ ಶ್ರೀನಿವಾಸದಾಸರು